४) यः अत्र सन्देहं करोति स ध्रुवं रकं स्थिरं क्रीडायुक्तसुखं न याति प्राप्नोति ।

५) यः अत्र वायुविषये सन्देहं समीचीनां देहसध्यां सेवां करोति स यातिनरकं नयतीति नः, यतिश्चासौ नश्च यतिनः यतिरूपः नायकः तत्सम्बन्धि यातिनं रकं यतिसंबन्धिसुखं पारिव्राज्यसम्बन्धि-धर्मानुष्ठानलभ्यं सुखमिति यावत्, याति ।

६) अथवा यतिना नीयते इति यतिनः यतिशिष्यः तत्सम्बन्धि रकं सुखं याति । "तद्भक्तोऽपि हि यद्गच्छेत्तद्गृहस्थो न धार्मिकः" (५.२) इति गीताभाष्योक्तेः ।

७) यः अत्र वायुविषये सन्देहं करोति तस्य इत्यध्याहारः, सया साररूपत्वात् साशब्दवाच्यया भारत्या स्वपतिमाहात्म्यविषय-विशयामर्षया अतिनरकं ध्रुवं भवतीति शेषः ।

अत्त्रसन्देहं अत्ता फलभोक्ता, भावप्रधान्यम्, फलभोक्तृत्वविषये सन्देहाभावं करोति अत्तरि सन्देहः अत्तृसन्देहः न अत्तृसन्देहः अत्त्रसन्देहः । न साध्याधिकरणं साध्यानधिकरणमितिवत् । अत्तृनिश्चय इति यावत्, सन्देहभिन्नः ज्ञानत्वेन सन्देहसदृशः निश्चयः तं करोति यः सः नरकं न रीयत इति नरं नाशरहितं कं सुखं याति प्राप्नोति ।

सत्यप्रमोदव्रतिनः शिष्येणात्यल्पबुद्धिना ।
सत्यात्मनामयतिना कृतया सेवयानया ॥

सत्यप्रमोदहृदयवासिनो भारतीपतेः ।
अन्तर्यामी मूलरामः प्रीयतां पूर्णसद्गुणः ॥

॥ श्रीकृष्णार्पणमस्तु ॥



ವ್ರಜಾಮಿ ಶ್ರೀಹನೂಮಂತಂ ಹೇಮಕಾಂತಿಸಮಪ್ರಭಮ್ ।
ವ್ಯಾಸತೀರ್ಥಯತೀಂದ್ರೇಣ ಪೂಜಿತಂ ಚ ವಿಧಾನತಃ ॥

# ಯಂತ್ರೋದ್ಧಾರಕಹನುಮತ್‌ಸ್ತೋತ್ರಮ್

ಶ್ರೀಮದ್ವ್ಯಾಸರಾಜರು ಮಹಾನುಭಾವರು. ಅಗಮ್ಯಮಹಿಮರು. ಅವರು ರಚಿಸಿದ ಗ್ರಂಥಗಳು ವ್ಯಾಸತ್ರಯಗಳೆಂದೇ ಪಂಡಿತವರ್ಗಗಳಲ್ಲಿ ಸನ್ಮಾನ್ಯವಾಗಿವೆ. ಟಿಪ್ಪಣಿಗಳು, ಖಂಡನಾಭಾಸಗ್ರಂಥಗಳು, ಮಂಡನಗ್ರಂಥಗಳಿಂದ ಸಮಲಂಕೃತವಾದ ಗ್ರಂಥಗಳ ರಚನೆಯಿಂದ ವಿಶಿಷ್ಟವಾದ ಸ್ಥಾನವನ್ನು ಶ್ರೀವ್ಯಾಸರಾಜರು ಸಂಪಾದಿಸಿದ್ದಾರೆ. ಹೀಗೆ ಟೀಕಾಕೃತ್ಪಾದರ, ಶ್ರೀಮದಾಚಾರ್ಯರ, ಶ್ರೀವೇದವ್ಯಾಸರ ಅತಿವಿಶಿಷ್ಟವಾದ ಸೇವೆಯನ್ನು ಮಾಡಿದ್ದಾರೆ.

ಅಂಥ ವ್ಯಾಸರಾಜರು ಯಂತ್ರವನ್ನು ಬರೆದು ಅಲ್ಲಿ ಮುಖ್ಯಪ್ರಾಣದೇವರ ಪ್ರತಿಷ್ಠಾಪನೆಯನ್ನು ಮಾಡಿದ್ದಾರೆ. ಆ ಯಂತ್ರೋದ್ಧಾರಕ ಮುಖ್ಯಪ್ರಾಣದೇವರ ಸ್ತುತಿಯನ್ನೂ ಮಾಡಿದ್ದಾರೆ. ಅದೇ ಸ್ತುತಿ ಇದು.

**गुणपूर्णं दोषदूरं मूलरामं प्रणम्य च ।**
**मध्वं जयमुनिं व्यासयोगिनं मद्गुरुं तथा ।।**

**स्तोत्रं यन्त्रोद्धारकस्य पवनस्य महात्मनः ।**
**व्यासतीर्थकृतं भक्त्या तत्प्रीत्यै व्याकरोम्यहम् ।।**

ಅಸ್ಮದುಪಾಸ್ಯನಾದ ಶ್ರೀಮೂಲರಾಮ ಅನಂತಗುಣಗಳಿಂದ ಪರಿಪೂರ್ಣ. ಸರ್ವದೋಷಗಳಿಂದ ಅತಿದೂರ. ಆ ಮೂಲರಾಮಚಂದ್ರದೇವರಿಗೆ ಭಕ್ತಿಯಿಂದ ನಮಸ್ಕರಿಸುತ್ತೇವೆ. ಶ್ರೀಮನ್ಮಧ್ವಾಚಾರ್ಯರನ್ನು, ಜಯತೀರ್ಥರನ್ನು, ವ್ಯಾಸಯೋಗಿಗಳನ್ನು ಮತ್ತು ನಮ್ಮ ಗುರುಗಳನ್ನು (ಶ್ರೀಸತ್ಯಪ್ರಮೋದತೀರ್ಥರು) ನಮಸ್ಕರಿಸುತ್ತೇವೆ.

ಇದು ಯಂತ್ರೋದ್ಧಾರಕಸ್ತೋತ್ರ. ಶ್ರೀವ್ಯಾಸತೀರ್ಥರು ಈ ಸ್ತುತಿಯನ್ನು ರಚಿಸಿದ್ದಾರೆ. ಪರಮಾತ್ಮನ ಪ್ರೀತಿಗಾಗಿ ಆ ಯಂತ್ರೋದ್ಧಾರಕ ಸ್ತುತಿಯನ್ನು ವ್ಯಾಖ್ಯಾನಿಸುತ್ತೇವೆ.

**ರಾಮಸ್ಯ ದೂತಂ= ರಾಮನ ದೂತ**

**रामस्य दूतं– रामकार्यसाधकम् । गत्यर्थाद् ''दु'' धातोः कर्तरि क्तप्रत्यये निष्पन्नः दूतशब्दः, गतिकर्तारमाह । रामाज्ञया लङ्कां गत्वा, सीताकृतिं दृष्ट्वा, तस्यै रामस्य अङ्गुलीयकं दत्वा, रावणं प्रति गत्वा, तं भीषयित्वा पुनः रामं प्रति आगतः । तथाच लङ्कां प्रति गमनकर्तृत्वात्, रावणं प्रति गमनात्, पुनः रामं प्रति आगमनाच्च दूतशब्दः हनूमति उपपन्नः ।**

ರಾಮಚಂದ್ರದೇವರ ದೂತರು ಹನುಮಂತದೇವರು. ರಾಮಚಂದ್ರ-ದೇವರ ಎಲ್ಲ ಕಾರ್ಯಗಳನ್ನು ಸಾಧಿಸುವವರು ಎಂದು ತಾತ್ಪರ್ಯ. ಈ ದೂತ ಎಂಬ ಶಬ್ದಕ್ಕೆ ಗತಿಕರ್ತಾ ಗಮನ ಮಾಡುವವನು ಎಂದು ಅರ್ಥ ಇದೆ.

ಈ ಪ್ರಸಂಗದಲ್ಲಿ ಒಂದು ವಿಶೇಷವನ್ನು ತಿಳಿಯಬೇಕು. ಸಾಮಾನ್ಯವಾಗಿ ಸೇವಕ ದೂತ ಎಂಬ ಪದಗಳು ಒಂದೇ ಅರ್ಥವನ್ನು ಹೇಳುತ್ತವೆ ಎಂದು ತಿಳಿದಿರುತ್ತಾರೆ. ಆದರೆ ಸೇವಕ ಮತ್ತು ದೂತರಲ್ಲಿ ತುಂಬ ವ್ಯತ್ಯಾಸವಿದೆ. ಸೇವಕರು ಬೇರೆಯೇ. ದೂತರು ಬೇರೆಯೇ. ದೂತರು ಸೇವಕರಾಗಬಹುದು. ಸೇವಕರೆಲ್ಲರೂ ದೂತರಾಗಲಾರರು. ಅದನ್ನು ಸ್ಪಷ್ಟವಾಗಿ ತಿಳಿಯೋಣ.

**ಸೇವಕರು ಯಾರು?**

ಕುಳಿತಲ್ಲಿಯೇ ಕುಳಿತು, ಇದ್ದಲ್ಲಿಯೇ ಇದ್ದು ಯಜಮಾನ ಹೇಳಿದ ಕೆಲಸಗಳನ್ನು ಮಾಡುವವರು ಸೇವಕರು. ಕಸ ಬಳಿಯುವುದು, ಅಡಿಗೆ ಮಾಡುವುದು, ಕಾಲು ಒತ್ತುವುದು ಇತ್ಯಾದಿ ಕೆಲಸಗಳನ್ನು ಮಾಡಲು ಅವನು ಎಲ್ಲಿಗೂ ಹೋಗುವ ಕಾರಣವಿಲ್ಲ. ತಾನಿದ್ದಲ್ಲಿಯೇ ಈ ಸೇವೆಗಳನ್ನು ಮಾಡಬಹುದು. ಆದ್ದರಿಂದ ಅವರು ಸೇವಕರು ಮಾತ್ರ. ಆದರೆ ಅವರನ್ನು ದೂತರು ಎಂದು ಕರೆಯಬಾರದು.

## ದೂತರು ಯಾರು?

''ದು ಗತೌ'' ಎಂಬ ಕ್ರಿಯಾಪದದಿಂದ ಸಿದ್ಧವಾದ ರೂಪ ದೂತ ಎಂಬುದು. ಸಂಚಾರಮಾಡುತ್ತಾ ಯಜಮಾನನ ಕೆಲಸಗಳನ್ನು ಸಾಧಿಸುವ ವ್ಯಕ್ತಿಗಳು ದೂತರೆನಿಸುತ್ತಾರೆ.

## ಜೀವೋತ್ತಮರು ದೂತೋತ್ತಮರು

ಹೀಗೆ ಗಮನಮಾಡುವ ಮೂಲಕ ರಾಮಚಂದ್ರದೇವರ ಕಾರ್ಯಗಳನ್ನು ಸಾಧಿಸುತ್ತಾರೆ. ರಾಮಚಂದ್ರದೇವರ ಸೇವೆ ಮಾಡುತ್ತಾರೆ. ಆದ್ದರಿಂದ ಈ ದೂತ ಎಂಬ ಶಬ್ದ ಹನುಮಂತದೇವರಿಗೆ ಅತ್ಯಂತ ಅನ್ವರ್ಥವಾಗಿದೆ.

ಯಜಮಾನ ಹೇಳಿದ ವಿಷಯವನ್ನು ಸರಿಯಾಗಿ ತಿಳಿಯಬೇಕು. ಯಥಾತಥವಾಗಿಯೇ ಆ ವಿಷಯಗಳನ್ನು ತಿಳಿಸಬೇಕು. ಆ ತಿಳುವಳಿಕೆ ಇರಬೇಕು. ಅಂಥವನೇ ದೂತನಾಗಬೇಕು.

ರಾಮಚಂದ್ರದೇವರ ಆಜ್ಞೆಯಿಂದ ಮಾಹೇಂದ್ರಪರ್ವತದಿಂದ ಸಮುದ್ರವನ್ನು ಹಾರುತ್ತಾರೆ. ರಾಮಚಂದ್ರದೇವರ ಸೇವೆಗಾಗಿ ಲಂಕೆಗೆ ಹೋಗುತ್ತಾರೆ. ರಾವಣನ ಹತ್ತಿರ ಹೋಗುತ್ತಾರೆ. ಮತ್ತೆ ರಾಮನನ್ನು ಕುರಿತು ಬರುತ್ತಾರೆ. ಹೀಗೆ ನಿರಂತರ ಗಮನ ಮಾಡುತ್ತಾರೆ. ಆದ್ದರಿಂದ ಹನುಮಂತದೇವರು ದೂತರೆನಿಸಿದ್ದಾರೆ. ಹೀಗೆ ಇಲ್ಲಿ ಗಮನ ಎಂಬ ಕೆಲಸವಾಗಿದೆ. ಈ ಗಮನ ಮಾಡಲು ಯಾರೂ ಸಮರ್ಥರಾಗಲಿಲ್ಲ. ಆದ್ದರಿಂದ ಅವರಾರೂ ರಾಮನ ನಿಜವಾದ ದೂತರಲ್ಲ. ಹನುಮಂತದೇವರಿಗೆ ಮಾತ್ರ ಈ ಗಮನ ಸಾಧ್ಯವಾಯಿತು. ಆದ್ದರಿಂದ ಹನುಮಂತದೇವರು ದೂತರೆನಿಸುತ್ತಾರೆ. ದೂತೋತ್ತಮರೆನಿಸಿದ್ದಾರೆ.

## ದೂತನು ಜ್ಞಾನಿಯೂ ಆಗಿರಬೇಕು

ಹೋಗಿ ಬರುವ ಮೂಲಕ ಗಮನ ಮಾಡುವವನು ಮಾತ್ರ ದೂತನಲ್ಲ. ದೂತನಿಗೆ ಜ್ಞಾನವೂ ಇರಬೇಕು. ''ದು'' ಧಾತು ಗತ್ಯರ್ಥಕವಾಗಿದೆ. ಗತ್ಯರ್ಥಕವಾದ ಕ್ರಿಯಾಪದ ಜ್ಞಾನಾರ್ಥಕವೂ ಆಗಿರುತ್ತದೆ. ಆದ್ದರಿಂದ ಹೋಗಿ ಬರುವವ ಮಾತ್ರ ನಿಜವಾಗಿ ದೂತನಾಗಲಾರ. ಯಜಮಾನನ ಭಾವಗಳನ್ನು ಸರಿಯಾಗಿ ಬಲ್ಲವನೇ ನಿಜವಾಗಿ ದೂತನೆನಿಸುತ್ತಾನೆ.

ಯಜಮಾನನಿಗೆ ಕ್ರೋಧ ತರಿಸುವ ಕಾರ್ಯಗಳು ಯಾವೆಂದು ತಿಳಿದಿರಬೇಕು. ಯಜಮಾನನನ್ನು ಕಳವಳಗೊಳಿಸುವ ಕೆಲಸಗಳನ್ನು ಅರಿತಿರಬೇಕು. ಯಜಮಾನನ ಬೇಸರಕ್ಕೆ ಕಾರಣವಾದ ಕಾರ್ಯಗಳನ್ನು ತಿಳಿದಿರಬೇಕು. ಆ ಎಲ್ಲ ಕಾರ್ಯಗಳಿಂದ ಅತಿದೂರನಾಗಿ ಇರಬೇಕು. ಎಂದಿಗೂ ಅಂಥ ಕೆಲಸಗಳನ್ನು ಮಾಡಲೇಬಾರದು.

ಯಜಮಾನನ ಪ್ರೀತಿಗೆ, ಸಂತೋಷಕ್ಕೆ, ಸಮಾಧಾನಕ್ಕೆ ಸಾಧನವಾಗುವಂಥ ಕೆಲಸಗಳನ್ನು ತಿಳಿದಿರಬೇಕು. ಆ ಕಾರ್ಯಗಳಲ್ಲಿಯೇ ಸದಾ ಪ್ರವೃತ್ತನಾಗಿ ಇರಬೇಕು. ಇಂಥ ದೂತನ ಮೇಲೆ ಯಜಮಾನ ಅತ್ಯಂತವಾಗಿ ಪ್ರಸನ್ನ ನಾಗುತ್ತಾನೆ. ಈ ದೂತನೇ ಯಜಮಾನನಿಗೆ ಅತಿಪ್ರಿಯನಾಗುತ್ತಾನೆ.

ನೂರುಯೋಜನದ ಸಮುದ್ರವನ್ನು ಹಾರಿ ಬಂದ ಮಾತ್ರಕ್ಕೆ ಹನುಮಂತದೇವರನ್ನು ನಿಜವಾದ ದೂತರು ಎಂದು ತಿಳಿದರೆ ತಪ್ಪಾದೀತು.

ಸಮುದ್ರದಾಟುವಾಗ ಮೈನಾಕಪರ್ವತದಲ್ಲಿ ವಿಶ್ರಾಂತಿಯನ್ನು ತೆಗೆದುಕೊಳ್ಳುವುದಿಲ್ಲ. ವಾತ್ಸಲ್ಯದಿಂದ ಅಪ್ಪಿಕೊಂಡು ಮುಂದೆ ಹೋಗುತ್ತಾರೆ. ಸಣ್ಣ ರೂಪ ಧರಿಸುತ್ತಾರೆ. ನಾಗಜನನಿಯ ಮುಖದಲ್ಲಿ ಹೋಗುತ್ತಾರೆ. ಮತ್ತೆ ಹೊರಗೆ ಬರುತ್ತಾರೆ. ದೇವತೆಗಳನ್ನು ಸಂತೋಷಪಡಿಸುತ್ತಾರೆ. ನೆರಳನ್ನು ಹಿಡಿದು ಎಳೆಯುವ ಸಿಂಹಿಕೆಯನ್ನು ನೋಡುತ್ತಾರೆ. ಅವಳನ್ನೂ ಜಯಿಸುತ್ತಾರೆ. ಲಂಕಿಣಿಯನ್ನು ಕಾಣುತ್ತಾರೆ. ಅವಳನ್ನೂ ಗೆದ್ದು ಲಂಕೆಯನ್ನು ಪ್ರವೇಶ ಮಾಡುತ್ತಾರೆ.

ಲಂಕೆಗೆ ಹೋಗಿ ಸೀತಾಕೃತಿಯನ್ನು ಕಾಣುತ್ತಾರೆ. ಆ ಸೀತಾಕೃತಿಯಲ್ಲಿ ಸನ್ನಿಹಿತನಾದ ಇಂದ್ರನನ್ನೂ ಕಾಣುತ್ತಾರೆ. ಆ ಇಂದ್ರನು ಮಾಡುತ್ತಿರುವ ಸೇವೆಗೆ ಹರಿಸುತ್ತಾರೆ. ಸೀತಾಕೃತಿಯಲ್ಲಿ ಸನ್ನಿಹಿತಳಾದ ನಿಜವಾದ ಸೀತಾದೇವಿಯನ್ನೂ ದರ್ಶನ ಮಾಡಿಕೊಳ್ಳುತ್ತಾರೆ. ಅವಳನ್ನು ಭಕ್ತಿಯಿಂದ ಸೇವಿಸುತ್ತಾರೆ.

ಆ ಸೀತಾಕೃತಿಗೆ ರಾಮನ ಉಂಗುರವನ್ನು ನೀಡುತ್ತಾರೆ. ೮೦ ಕೋಟಿ ೮೦ ಸಾವಿರ ದಾನವರನ್ನು ಸಂಹರಿಸುತ್ತಾರೆ. ಅಕ್ಷಕುಮಾರನನ್ನು ಸಂಹರಿಸುತ್ತಾರೆ. ಇಂದ್ರಜಿತ್ತನ್ನು ಸೋಲಿಸುತ್ತಾರೆ. ಸಮರ್ಥರಾಗಿದ್ದರೂ ಇಂದ್ರಜಿತ್ತನ್ನು ಸಂಹರಿಸುವುದಿಲ್ಲ. ರಾವಣನ ಹತ್ತಿರ ಹೋಗುತ್ತಾರೆ. ಅವನನ್ನು ಭಯಪಡಿಸುತ್ತಾರೆ. ರಾವಣನನ್ನು ಸಂಹರಿಸುವ ಸಾಮರ್ಥ್ಯವಿದ್ದರೂ ಹಾಗೆಯೇ

ಬಿಡುತ್ತಾರೆ. ವಿಭೀಷಣನ ವಿಷ್ಣುಭಕ್ತಿಯನ್ನು ಗಮನಿಸುತ್ತಾರೆ. ಅವನನ್ನು ಆಶೀರ್ವದಿಸುತ್ತಾರೆ. ಲಂಕೆಯನ್ನು ದಹಿಸುತ್ತಾರೆ. ಸೀತೆಯ ವಾರ್ತೆಯನ್ನು ಅರುಹಲು ಮತ್ತೆ ರಾಮನಿದ್ದಲ್ಲಿ ಬರುತ್ತಾರೆ. ರಾಮನಿಗೆ ಚೂಡಾಮಣಿಯನ್ನಿತ್ತು ಅವರ ಸೇವೆಯನ್ನು ಅನಿತರಸಾಧಾರಣವಾಗಿ ಮಾಡುತ್ತಾರೆ ಹನುಮಂತದೇವರು.

ಹನುಮಂತದೇವರು ಮಾಡಿದ ಯಾವ ಸಣ್ಣ ಕಾರ್ಯದಿಂದಲೂ ರಾಮಚಂದ್ರದೇವರಿಗೆ ಬೇಸರವಾದದ್ದಿಲ್ಲ. ಹನುಮಂತ ಹೀಗೆ ಮಾಡಬಾರದಾಗಿತ್ತು . ಹೀಗೆ ಮಾಡಬೇಕಾಗಿತ್ತು. ಎಂದು ರಾಮ ಅಂದುಕೊಳ್ಳಲೇ ಇಲ್ಲ. ಹನುಮಂತದೇವರು ಮಾಡಿದ ಕೆಲಸಕ್ಕೆ ರಾಮಚಂದ್ರದೇವರು ಕ್ರುದ್ಧರಾಗಲೇ ಇಲ್ಲ. ಹನುಮಂತದೇವರು ಮಾಡಿದ ಪ್ರತಿಯೊಂದು ಕಾರ್ಯವನ್ನೂ ಮೆಚ್ಚಿಕೊಂಡಿದ್ದಾರೆ. ಅದಕ್ಕೆ ಪ್ರತಿಯಾಗಿ ಪಾರಮೇಷ್ಠ್ಯಪದವಿಯನ್ನೇ ನೀಡಿದ್ದಾರೆ. ಹೀಗೆ ಗಮನ ಮಾಡುತ್ತಾ, ತಿಳುವಳಿಕೆಯಿಂದಲೇ ಸೀತಾ-ರಾಮರ ಸೇವೆ ಮಾಡಿದ್ದಕ್ಕಾಗಿ ದೂತಶಬ್ದವು ಹನುಮಂತದೇವರಲ್ಲಿ ಸರಿಯಾಗಿ ಸಮನ್ವಿತವಾಗುತ್ತದೆ.

ಈ ಅರ್ಥವನ್ನು ತಿಳಿಸುವಂತೆಯೇ ಶ್ರೀಮದಾಚಾರ್ಯರ ವಚನವು ತಾತ್ಪರ್ಯನಿರ್ಣಯದಲ್ಲಿ ಉದಾಹೃತವಾಗಿದೆ. ಹನುಮಂತದೇವರು ರಾವಣನಿಗೆ ತನ್ನ ಪರಿಚಯವನ್ನು ಹೇಳುತ್ತಾ **ದೂತಂ ಆಗತಂ** ಎನ್ನುತ್ತಾರೆ. ಇಲ್ಲಿಯ **ದೂತಂ** ಎಂಬ ಪದವನ್ನು **ಆಗತಂ** ಎಂಬ ಪದವು ವ್ಯಾಖ್ಯಾನಿಸುತ್ತದೆ.

**अवैहि दूतमागतं दुरन्तविक्रमस्य माम् ।**
**रघूत्तमस्य मारुतिं कुलक्षये तवेश्वरम् ।।७.३८**

**इति भारततात्पर्यनिर्णयोक्तेः ।**

ವಾಯುದೇವರು ಹನುಮಂತದೇವರಾಗಿ ಅವತರಿಸಿದರು. ಆ ಪ್ರಸಂಗದಲ್ಲಿ ಮಾತ್ರ ದೇವರ ಸೇವೆ ಮಾಡಲು ಈ ರೀತಿಯಾದ ಗಮನ ಮಾಡಿದರು. ಎಂದಿಷ್ಟೇ ತಿಳಿಯುವುದು ತಪ್ಪು. ಭಗವಂತನ ಆಜ್ಞೆಯಿಂದ ವಾಯುದೇವರು ಎಲ್ಲ ಜೀವರನ್ನು ಸಂರಕ್ಷಿಸುತ್ತಾರೆ. ಅದಕ್ಕಾಗಿ ಪ್ರತಿಯೊಂದು ಕಡೆಗೂ ಹೋಗುತ್ತಾರೆ. ಆದ್ದರಿಂದ ವಾಯುದೇವರು ಸದಾ ಪರಮಾತ್ಮನ ದೂತರು ಎಂಬುದಾಗಿ ತಿಳಿಯಬೇಕು. ಐತರೇಯಭಾಷ್ಯವು ಈ ವಿಷಯವನ್ನು ಸ್ಪಷ್ಟಪಡಿಸುತ್ತದೆ.

न केवलमेतावदपि तु सर्वदा भगवदाज्ञया सर्वजीवजातगोपनार्थं सर्वत्र गमनाच्च भगवतो रामस्य दूतो वायुः, तथाहि ऐतरेयभाष्ये-

मन्त्रोऽप्यर्थमिमं प्रहापश्यं गोपामिति स्म ह ।
एष गोप्ता हि सर्वस्य वायुस्थः पुरुषोत्तमः ।।

छन्दस्सु संस्थितो वायुः वायौ स च जनार्दनः ।
वायुश्च वायुसंस्थश्च कदाचिन्न हि तिष्ठतः ।।

**वायुर्हि नित्यसञ्चारी** सदा सर्वत्र वृत्तिमान् ।
चोदितः केशवेनैव तत्स्थेनामितशक्तिना ।।

आसमन्तात् पराक् चापि पञ्चभूतेभ्य ईश्वरः ।
वायुस्तत्स्थो हरिश्चैव चरत्यमितपौरुषः ।।

सध्रीचीनासु पूर्वादिदिक्ष्वेतौ चतसृष्वपि ।
नित्यदा वसतः कोणादिष्वथासु विषूचिषु ।।
अन्तश्च सर्वभूतेषु चरतो लोकसाक्षिणौ ।। ऐ.भा.६ब्राह्मणं

अनेन वैकुण्ठगो विष्णुरित्यादि प्रयोगेषु स्थित्यर्थेऽपि गमधातुदर्शनाद् अत्रापि रामस्य आज्ञया, रामप्रेरणया, रामस्य प्रीत्यै सदा सर्वदिक्षु विदिक्षु च स्थित इत्यर्थेऽपि दूतशब्दो वायुः भवति इति सिद्ध्यति ।

### ಸೇವೆಗಾಗಿ ಎಲ್ಲ ಕಡೆ ಇದ್ದವನು ದೂತ

ದೂತ ಎಂದರೆ ಗತ ಎಂದು ಅರ್ಥ. ಗತ ಎಂದರೆ ಗಮನ ಮಾಡುವವನು ಎಂದು ಇಷ್ಟೇ ಅರ್ಥವಲ್ಲ. ಕಿಂತು ಇದ್ದವನು ಎಂದೂ ಅರ್ಥ ಮಾಡಬಹುದು. ''ವೈಕುಂಠಗೋ ವಿಷ್ಣುಃ'' ಎಂಬಲ್ಲಿ ವಿಷ್ಣುವು ವೈಕುಂಠದಲ್ಲಿ ಇದ್ದಾನೆ ಎಂಬುದಾಗಿ ಸ್ಥಿತ್ಯರ್ಥದಲ್ಲಿಯೂ ಗಮ ಧಾತುವಿನ ಪ್ರಯೋಗ ಮಾಡಿದ್ದಾರೆ.

ಆದ್ದರಿಂದ ದೂತ ಎಂದರೆ ಎಲ್ಲ ಕಡೆಗೆ ಇರುವವನು ಎಂದು ಅರ್ಥ. ರಾಮನ ಆಜ್ಞೆಯಿಂದ, ರಾಮನ ಪ್ರೇರಣೆಯಿಂದ, ರಾಮನ ಪ್ರೀತಿಗಾಗಿ, ರಾಮನನ್ನು ಸೇವಿಸುವುದಕ್ಕಾಗಿ ಎಲ್ಲ ದಿಕ್ಕುಗಳಲ್ಲಿ, ಎಲ್ಲ ವಿದಿಕ್ಕುಗಳಲ್ಲಿ ಹನುಮಂತದೇವರು ಇದ್ದಾರೆ. ಆದ್ದರಿಂದ ಅವರನ್ನು **ರಾಮಸ್ಯ ದೂತಂ** ಎಂದು ವ್ಯಾಸರಾಜರು ಸ್ತುತಿಸುತ್ತಿದ್ದಾರೆ.

**किञ्च ऋग्भाष्ये प्रथमाध्यायगतद्वादशसूक्तस्थप्रथमवर्गस्थ प्रथममन्त्रस्य ''अग्निं दूतम्'' इत्यस्य व्याख्यानप्रसङ्गे,**

**यज्ञभागार्थमत्रस्थो देवैः सम्प्रेषितो यतः ।**
**दूतोऽग्निर्वासुदेवश्च तत्तत्प्रार्थितकृद्यतः ॥**

**इत्यभ्यधायि भगवत्पादैः । टीकायाश्च जयतीर्थश्रीमच्चरणैरेवमुक्तम् । तथाहि–**

**यतोऽग्निर्यज्ञभागार्थं देवैः सम्प्रेषितस्ततो दूतः । सन्देशेन यः प्रेष्यते स हि दूत उच्यते । अत्रस्थोऽग्निस्थो वासुदेवश्च तत्तत्प्रार्थित-कृद्यतोऽतो दूत इव दूत इति ।**

**''सन्देशेन आज्ञया'' इति श्रीनिवासतीर्थाः । अनेन दूतत्वं द्विविधम्, आज्ञया प्रेषितत्वे सति सन्देशहरत्वरूपं निकृष्टनिष्ठमेकम् । तत्तत्प्रार्थितकृत्त्वरूपमुत्कृष्टनिष्ठमपरमिति ज्ञायते ।**

### ಹನುಮಂತದೇವರು ನಿಕೃಷ್ಟದೂತರು

ಈ ವಿಷಯವನ್ನು ಸರಿಯಾಗಿ ತಿಳಿದುಕೊಳ್ಳಬೇಕು.

ಯಜ್ಞದಲ್ಲಿಯ ಭಾಗವನ್ನು ತರುವುದಕ್ಕಾಗಿ ದೇವತೆಗಳೆಲ್ಲ ಅಗ್ನಿಗೆ ಆದೇಶಮಾಡಿ ಕಳಿಸುತ್ತಾರೆ. ಯಾರು ಯಾರನ್ನು ಆದೇಶ ಮಾಡಿ ಕಳಿಸುತ್ತಾರೋ ಅವರು ದೂತರು ಎಂಬುದಾಗಿ ತಿಳಿಯಬೇಕು. ಹೀಗಾಗಿ ಸಂದಿಷ್ಟನಾಗಿ ಕಳುಹಿಸಲ್ಪಟ್ಟವನಾದುದರಿಂದ ಅಗ್ನಿಯು ದೇವತೆಗಳ ದೂತನೆಂದು ತಿಳಿಯಬೇಕು.

ಮತ್ತು ಅಗ್ನಿಯಲ್ಲಿದ್ದು ಆಯಾ ಯಜಮಾನರ ಬೇಡಿಕೆಗಳನ್ನು ಈಡೇರಿಸುತ್ತಾನೆ ಪರಮಾತ್ಮ. ಆದ್ದರಿಂದ ದೇವರು ಕೂಡಾ ಭಕ್ತರ ದೂತನಾಗಿದ್ದಾನೆ ಎಂದು ಶಾಸ್ತ್ರವು ಹೇಳುತ್ತದೆ.

ಈ ಮಾತುಗಳಿಂದ ದೂತತ್ವವು ಎರಡು ವಿಧವಾಗಿದೆ ಎಂಬುದಾಗಿ ತಿಳಿದು ಬರುತ್ತದೆ.

೧. ಯಜಮಾನ ತನ್ನ ಕಾರ್ಯಕ್ಕಾಗಿ ಯಾರನ್ನು ಕಳುಹಿಸುತ್ತಾನೋ ಅವನು ನಿಕೃಷ್ಟದೂತನೆನಿಸುತ್ತಾನೆ. ಈ ದೂತನು ಸೇವಕನೂ ಆಗುತ್ತಾನೆ.

೨. ಅವರವರ ಅಭೀಷ್ಟಗಳನ್ನು ಈಡೇರಿಸಲು ಯಾರು ಸಂಚರಿಸುತ್ತಾರೋ ಅವರು ಉತ್ತಮದೂತರೆನಿಸುತ್ತಾರೆ. ಇವರು ಸೇವಕರಲ್ಲ.

**प्रकृते च रामनिरूपितं वायुनिष्ठं दूतत्वं प्रथमप्रकारमेव ।**

ಪ್ರಕೃತ ಹನುಮಂತದೇವರು ರಾಮನ ದೂತರು ಎಂದು ಹೇಳುತ್ತಿದ್ದಾರೆ. ರಾಮನಿಗೆ ಹನುಮಂತದೇವರು ಎಂಥ ದೂತರು. ನಿಕೃಷ್ಟದೂತರೋ? ಉತ್ತಮದೂತರೋ? ಸಂದೇಹ ಬೇಡ. ರಾಮನಿಗಿಂತಲೂ ಹನುಮಂತ ಎಂದಿಗೂ ಉತ್ತಮನಾಗಲು ಸಾಧ್ಯವಿಲ್ಲ. ರಾಮನಿಗೆ ಆಗಬೇಕಾದ ಕೆಲಸಗಳೇ ಇಲ್ಲ. ಇದ್ದರೂ ಅವುಗಳನ್ನು ತಾನೇ ಸಾಧಿಸಿಕೊಳ್ಳುತ್ತಾನೆ. ಮತ್ತೊಬ್ಬರ ಅಪೇಕ್ಷೆ ರಾಮನಿಗೆ ಇಲ್ಲವೇ ಇಲ್ಲ. ಆದ್ದರಿಂದ ಹನುಮಂತದೇವರು ಉತ್ತಮದೂತರು ಎಂದು ಹೇಳುವುದು ಸೂಕ್ತವಲ್ಲ. ರಾಮಚಂದ್ರದೇವರಿಗೆ ಹನುಮಂತದೇವರು ನಿಕೃಷ್ಟದೂತರೇ ಆಗಿದ್ದಾರೆ ಎಂಬುದಾಗಿ ತಿಳಿಯಬೇಕು.

**तथा न केवलं गमनकर्तृत्वाद् दूतो वायुः । किन्तु आज्ञाप्रेषितत्वे सति सन्देशहरत्वादपि । सन्देशहरत्वमपि त्रिविधम्, उत्तमं, मध्यमं, अधमश्चेति ।**

ಹೀಗಾಗಿ ಗಮನಮಾಡುವುದರಿಂದ ಮಾತ್ರ ಹನುಮಂತದೇವರು ದೂತ ಎಂದು ತಿಳಿಯುವ ಕಾರಣವಿಲ್ಲ. ಕಿಂತು ಆಜ್ಞಾಪ್ರೇಷಿತನಾಗಿ ಸಂದೇಶವನ್ನು ಕೊಂಡೊಯ್ಯುವ ಕಾರಣಕ್ಕಾಗಿಯೂ ಹನುಮಂತದೇವರು ರಾಮಚಂದ್ರದೇವರ ದೂತರು ಎನಿಸುತ್ತಾರೆ.

## ಹನುಮಂತದೇವರು ನಿಸೃಷ್ಟಾರ್ಥದೂತರು

ಸಂದೇಶಹರತ್ವವು (ಸಂದೇಶವನ್ನು ಒಯ್ಯುವುದು) ಕೂಡಾ ಮೂರುವಿಧವಾಗಿದೆ. ಸಂದೇಶಹರನಾದ ದೂತನೂ ಮೂರುವಿಧನಾಗಿದ್ದಾನೆ. ಉತ್ತಮ, ಮಧ್ಯಮ ಮತ್ತು ಅಧಮ. ಇವುಗಳನ್ನು ಸರಿಯಾಗಿ ತಿಳಿಯಬೇಕು.

**उत्तमम् निसृष्टार्थत्वलक्षणम् । तथाहि–**

**[१]अमात्यसम्पदोपेतो निसृष्टार्थः । अर्थशास्त्रे ।।१६.२।।**

ವಿಷ್ಣುಗುಪ್ತನು ತನ್ನ ಅರ್ಥಶಾಸ್ತ್ರದಲ್ಲಿ ದೂತರ ಉತ್ಪತ್ತಿಯನ್ನು ಹೇಳುತ್ತಾ ೧ ನಿಸೃಸ್ಟಾರ್ಥ, ೨. ಮಿತಾರ್ಥ, ೩. ಶಾಸನಹರ ಎಂಬುದಾಗಿ ದೂತರು ತ್ರಿವಿಧರಾಗಿದ್ದಾರೆ. ಎಂದು ತಿಳಿಸುತ್ತಾನೆ. ಅದನ್ನು ವಿವರವಾಗಿ ತಿಳಿಯೋಣ.

ಅಮಾತ್ಯರ ಸಂಪತ್ತಿನಿಂದ ಯುಕ್ತನಾದವನು ನಿಸೃಷ್ಟಾರ್ಥನೆನಿಸುತ್ತಾನೆ. ಅಮಾತ್ಯರ ಸಂಪತ್ತುಗಳನ್ನು ಅರ್ಥಶಾಸ್ತ್ರದ ಒಂಭತ್ತನೆಯ ಅಧ್ಯಾಯದಲ್ಲಿ ಹೇಳಿದ್ದಾರೆ. ಅವುಗಳನ್ನು ಗಮನಿಸಬೇಕು. ಈ ಗುಣವೈಭವದಿಂದ ಸಂಪನ್ನನಾದವನೇ ಅಮಾತ್ಯನಾಗಲು ಅರ್ಹನಾಗುತಾನೆ.

## ನಿಸೃಸ್ಟಾರ್ಥನಿಗೆ ಇರಬೇಕಾದ ೨೦ ಗುಣಗಳು

೧. **ಜಾನಪದಃ**=ತನ್ನ ರಾಷ್ಟ್ರದಲ್ಲಿಯೇ ಜನಿಸಿರಬೇಕು, ೨. **ಅಭಿಜಾತಃ**= ಉನ್ನತವಾದ, ಅತ್ಯಂತಪರಿಶುದ್ಧವಾದ ಕುಲದಲ್ಲಿ ಹುಟ್ಟಿರಬೇಕು, ೩. **ಸ್ವವಗ್ರಹಃ** =ಗುಣಶೀಲರಾದ, ಸಂಪ್ರದಾಯಗಳನ್ನು ಚೆನ್ನಾಗಿ ತಿಳಿದ ಬಂಧು-ಬಾಂಧವರಿಂದ ಸಮನ್ವಿತನಾಗಿರಬೇಕು, ರಾಜಾದಿಗಳು ಅಕಾರ್ಯಗಳಲ್ಲಿ ಪ್ರವೃತ್ತರಾಗಿದ್ದರೆ, ಆ ಅಕಾರ್ಯಗಳನ್ನು ಸುಲಭವಾಗಿ ತಡೆಯುವ ಸಾಮರ್ಥ್ಯವಿರಬೇಕು, ೪. **ಕೃತಶಿಲ್ಪಃ**=ಶಿಲ್ಪಶಾಸ್ತ್ರದಲ್ಲಿ ನಿಪುಣನಾಗಿರಬೇಕು,

---

१. जानपदः, अभिजातः, स्ववग्रहः, कृतशिल्पः, चक्षुष्मान्, प्राज्ञः, धारयिष्णुः, दक्षः, वाग्मी, प्रगल्भः, प्रतिपत्तिमान्, उत्साहप्रभावयुक्तः, क्लेशसहः, शुचिः, मैत्रः, दृढभक्तिः, शीलबलारोग्यसत्त्वसंयुक्तः, स्तम्भचापल्यवर्जितः, सम्प्रियः, वैराणामकर्ता इत्यमात्यसम्पत् ।। अर्थशास्त्रम्.९.१ ।।

ಗಜಾರೋಹಣ, ಅಶ್ವಾರೋಹಣ, ಯುದ್ಧವಿದ್ಯಾ, ಆಯುಧವಿದ್ಯಾ, ಗಾಂಧರ್ವವಿದ್ಯಾದಿಗಳಲ್ಲಿ ಸುಶಿಕ್ಷಿತನಾಗಿರಬೇಕು, ೫. **ಚಕ್ಷುಷ್ಮಾನ್**= ಕಣ್ಣಿನಂತೆಯೇ ಪ್ರಧಾನವಾದ ಅರ್ಥಶಾಸ್ತ್ರವನ್ನು ತಿಳಿದವನಾಗಿರಬೇಕು, ೬. **ಪ್ರಾಜ್ಞಃ**=ಸಹಜವಾದ ಬುದ್ಧಿಯಿಂದ ಸಂಪನ್ನನಾಗಿರಬೇಕು, ೭. **ಧಾರಯಿಷ್ಣುಃ** =ಒಂದುಬಾರಿ ಕೇಳಿದ ವಿಷಯವನ್ನು ಎಂದಿಗೂ ಮರೆಯದಂಥ ಸ್ವಭಾವದವನಾಗಿರಬೇಕು, ೮. **ದಕ್ಷಃ**=ವೇಗವಾಗಿ ಕಾರ್ಯಗಳನ್ನು ಮಾಡುವವನಾಗಿರಬೇಕು, ೯. **ವಾಗ್ಮೀ**=ಮಧುರವಾದಯುಕ್ತಿಯುಕ್ತವಾದ ಮಾತುಗಳನ್ನು ಆಡುವವನಾಗಿರಬೇಕು, ೧೦. **ಪ್ರಗಲ್ಭಃ**=ಪ್ರೌಢನಾಗಿರಬೇಕು, ೧೧. **ಪ್ರತಿಪತ್ತಿಮಾನ್**=ಪ್ರತಿಯಾಗಿ ಮಾಡಲು, ಪ್ರತಿಯಾಗಿ ಮಾತನಾಡಲು ಸಮರ್ಥನಾಗಿರಬೇಕು, ಈ ಕಾರ್ಯವನ್ನು ಹೀಗೆಯೇ ಮಾಡಬೇಕೆಂದು ಆ ಕ್ಷಣದಲ್ಲಿಯೇ ನಿಶ್ಚಿಯಿಸಿಕೊಳ್ಳಲು ಶಕ್ತನಾಗಿರಬೇಕು, ೧೨. **ಉತ್ಸಾಹಪ್ರಭಾವ-ಯುಕ್ತಃ**=ಸ್ಥಿರಬುದ್ಧಿಯಿಂದ ತೀವ್ರವಾದ ಪಯತ್ನಗಳನ್ನು ಮಾಡುವವನಾಗಿರ-ಬೇಕು, ಪ್ರಭುಶಕ್ತಿಯಿಂದ ಸಂಪನ್ನನಾಗಿರಬೇಕು, ೧೩. **ಕ್ಲೇಶಸಹಃ**=ಶ್ರಮವನ್ನು ಲೆಕ್ಕಿಸದ ಸಮರ್ಥನಾಗಿರಬೇಕು, ೧೪. **ಶುಚಿಃ** ಧರ್ಮ-ಅರ್ಥ-ಕಾಮ-ಮೋಕ್ಷಗಳ ಪರೀಕ್ಷೆಯಲ್ಲಿ ಪರಿಶುದ್ಧನಾಗಿರಬೇಕು, ೧೫. **ಮೈತ್ರಃ**= ಎಲ್ಲಕಡೆಗೂ ಸ್ನೇಹದಿಂದ ವ್ಯವಹಾರ ಮಾಡುವವನಾಗಿರಬೇಕು, ೧೬. **ದೃಢಭಕ್ತಿಃ**=ತನ್ನ ಯಜಮಾನನಾದ ರಾಜನಲ್ಲಿ ವಿಚಲಿತವಾಗದ ಗೌರವ ಇರಬೇಕು, ೧೭. **ಶೀಲಬಲಾರೋಗ್ಯಸತ್ತ್ವಸಂಯುಕ್ತಃ**=ಸದಾಚಾರ- ದೈಹಿಕಶಕ್ತಿ-ಆರೋಗ್ಯ-ಧೈರ್ಯ ಈ ಗುಣಗಳಿಂದ ಯುಕ್ತನಾಗಿರಬೇಕು, ೧೮. **ಸ್ತಂಭಚಾಪಲ್ಯವರ್ಜಿತಃ**= ಗರ್ವರಹಿತನಾಗಿರಬೇಕು, ವಿನೀತನಾಗಿರಬೇಕು, ಮತ್ತು ಸ್ಥಿರಸ್ವಭಾವದವ-ನಾಗಿರಬೇಕು, ೧೯. **ಸಂಪ್ರಿಯಃ**=ಸೌಮ್ಯವಾದ ವೇಷದವನಾಗಿರಬೇಕು, ೨೦. **ವೈರಾಣಾಮಕರ್ತಾ**=ಸ್ತ್ರೀ-ಭೂಮಿ ಇತ್ಯಾದಿ ಕಾರಣಗಳಿಂದಾಗಿ ವೈರವನ್ನು ಹುಟ್ಟಿಸದೇ, ಆ ವೈರಗಳನ್ನು ಪರಿಹರಿಸಲು ಸಮರ್ಥನು ಆಗಿರಬೇಕು.

ಹೀಗೆ ಇಪ್ಪತ್ತು ಗುಣಗಳಿಂದ ಸಂಪನ್ನನಾದವನು ಮಂತ್ರಿಯಾಗಲು ಅರ್ಹನೆನಿಸುತ್ತಾನೆ. ಈ ಎಲ್ಲ ಗುಣಗಳು ದೂತನಿಗೂ ಇರಬೇಕು.

ಸಾಮಾನ್ಯನಾದ ರಾಜನ ದೂತನಿಗೆ ಇಷ್ಟು ಗುಣಗಳು ಇರಬೇಕೆಂದಾದರೆ, ಸರ್ವೋತ್ತಮನಾದ, ಸಮಸ್ತಜಗತ್ತಿಗೆ ರಾಜಾಧಿರಾಜನಾದ, ಅನಂತಜೀವರಾಶಿಗಳ

ಅನಂತಾನಂತ ಕಾರ್ಯಗಳನ್ನು ಸಾಧಿಸುವ ಶ್ರೀರಾಮಚಂದ್ರನ ದೂತ ಅದೆಷ್ಟು ಗುಣಗಳಿಂದ ಸಂಪನ್ನನಾಗಿರಬೇಕೋ ಆಲೋಚಿಸಿ. ರಾಮನ ಪ್ರಧಾನದೂತನಲ್ಲಿಯ ಗುಣಗಳು ಮತ್ತಾರಲ್ಲಿಯೂ ಇರಬಾರದು. ಹೀಗೆ ಹನುಮಂತದೇವರು ರಾಮನ ದೂತರು ಎಂದು ಹೇಳುವ ಮೂಲಕ ಜೀವೋತ್ತಮರು ಎಂಬುದನ್ನೇ ವ್ಯಾಸರಾಜರು ತಿಳಿಸುತ್ತಿದ್ದಾರೆ.

## ೧. ನಿಸ್ಸೃಷ್ಟಾರ್ಥ ದೂತ

**य आजानीते तस्य यं प्रति सन्देशः कथ्येत तस्य च भावं विदित्वा उत्तरं वदति कार्यं च सम्यग् यः करोति स निसृष्टार्थः दूतः ।**

**उभयोर्भावमुन्नीय स्वयं वदति चोत्तरम् ।**
**सुश्लिष्टं कुरुते कार्यं निसृष्टार्थस्तु स स्मृतः ।।**

**(साहित्यदर्पणम्) ३-४८**

ಸಾಹಿತ್ಯದರ್ಪಣದಲ್ಲಿ ನಿಸ್ಸೃಷ್ಟಾರ್ಥ ದೂತನ ಬಗ್ಗೆ ಹೀಗೆ ತಿಳಿಸಿದ್ದಾರೆ.

ನಿಸ್ಸ್ರಾರ್ಥ-ಯಾರು ತನ್ನನ್ನು ಕಳಿಸಿದ್ದಾರೋ ಅಂಥ ಯಜಮಾನನ, ಯಾರ ಹತ್ತಿರ ತಾನು ಹೋಗಿರುವನೋ ಅಂಥ ವ್ಯಕ್ತಿಯ ಅಭಿಪ್ರಾಯಗಳನ್ನು ಸರಿಯಾಗಿ ಗ್ರಹಿಸಬೇಕು. ಅವರ ಹಾವ-ಭಾವಗಳನ್ನು, ಚಲನೆ-ವಲನೆಗಳನ್ನು ಸೂಕ್ಷ್ಮವಾಗಿ ಗಮನಿಸಬೇಕು. ಇವುಗಳಿಂದ ಆಯಾ ವ್ಯಕ್ತಿಗಳ ಅಭಿಪ್ರಾಯಗಳನ್ನು ತಾನೇ ಸರಿಯಾಗಿ ಊಹಿಸಿಕೊಳ್ಳಬೇಕು. ಸ್ವಯಂ ತಾನಾಗಿಯೇ ಅವರಿಗೆ ಉತ್ತರ-ಪ್ರತ್ಯುತ್ತರಗಳನ್ನು ನೀಡಬೇಕು. ಯಜಮಾನನ ಕಾರ್ಯವನ್ನು ಅಚ್ಚುಕಟ್ಟಾಗಿ ನಿಭಾಯಿಸಬೇಕು. ಅವನು ನಿಸ್ಸೃಷ್ಟಾರ್ಥದೂತ ಎನಿಸಿಕೊಳ್ಳುತ್ತಾನೆ.

**ನಿಸೃಷ್ಟಃ**=ತನ್ನ ಪ್ರಜ್ಞೆಯಿಂದಲೇ ನಿಷ್ಪಾದಿತವಾದ **ಅರ್ಥಃ**= ಯಜಮಾನನ ಪ್ರಯೋಜನ ಉಳ್ಳವನು. ತನ್ನ ಪ್ರತಿಭೆಯಿಂದಲೇ ಸ್ವಾಮಿಯ ಕಾರ್ಯವನ್ನು ಅತ್ಯಂತ ಸಮರ್ಥವಾಗಿ ಸಂಪನ್ನಗೊಳಿಸಿದವನು ಎಂದು ನಿಸ್ಸೃಷ್ಟಾರ್ಥ ಎಂಬ ಶಬ್ದದ ಅರ್ಥವನ್ನು ತಿಳಿಯಬೇಕು.

ಒಟ್ಟಾರೆ ಯಜಮಾನನಿಂದ ಆಜ್ಞಪ್ತನಾಗಿ, ಯಜಮಾನನ ಸಂದೇಶಗಳನ್ನು ಸರಿಯಾದ ವ್ಯಕ್ತಿಗಳಿಗೆ ಸರಿಯಾಗಿ ತಲುಪಿಸಿ, ಅವರ ಸಂದೇಶಗಳನ್ನು ಮತ್ತೆ ಯಜಮಾನನಿಗೆ ತಲುಪಿಸುವವ, ಮತ್ತು ಯಜಮಾನನ ಕಾರ್ಯವನ್ನು ಅಚ್ಚುಕಟ್ಟಾಗಿ ಮಾಡುವವ ನಿಸ್ಸೃಷ್ಟಾರ್ಥದೂತ. ಅವನು ಉತ್ತಮದೂತ-ನೆನಿಸುತ್ತಾನೆ.

ರಾಜ ಹೇಳಿದ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುತ್ತಾನೆ. ರಾಜನ ಮಾತುಗಳನ್ನು ಮತ್ತೊಬ್ಬರಿಗೆ ತಲುಪಿಸುತ್ತಾನೆ. ತನ್ನ ಪ್ರತಿಭೆಯಿಂದ ಮತ್ತಿಷ್ಟು ಹೆಚ್ಚಿನ ಕೆಲಸಗಳನ್ನು ಮಾಡುತ್ತಾನೆ. ಆ ಕೆಲಸಗಳಿಂದ ರಾಜನಿಗೂ ಅನುಕೂಲವೇ ಆಗುತ್ತದೆ. ಇವನು ಉತ್ತಮ ದೂತ.

**२) द्वितीयं मध्यमं मितार्थत्वलक्षणम् । पादगुणहीनः परिमितार्थः । अर्थशास्त्रे ।**

**मितार्थभाषी कार्यस्य सिध्दकारी मितार्थकः ।। सा.द.३-४९**

**अमात्यगुणेषु चतुर्थांशहीनः यावदुक्तं स्वामिना तावदेव वक्तुं प्रभवति परं कार्यं साधयति यः स मितार्थो दूतः ।**

### ೨. ಮಿತಾರ್ಥ ದೂತ

ದೂತರಲ್ಲಿ ಮಧ್ಯಮನು ಮಿತಾರ್ಥ ಎನಿಸುತ್ತಾನೆ. ಉತ್ತಮದೂತನಲ್ಲಿಯ ಪಾದಭಾಗ ಗುಣಗಳಿಂದ ಇವನು ಹೀನನಾಗಿರುತ್ತಾನೆ. ಅರ್ಥಶಾಸ್ತ್ರದಲ್ಲಿ ಈ ವಿಷಯವು ಸ್ಪಷ್ಟವಾಗಿದೆ.

ಸಾಹಿತ್ಯದರ್ಪಣದಲ್ಲಿ ಇದೇ ವಿಷಯವನ್ನು ಮತ್ತಿಷ್ಟು ಸ್ಪಷ್ಟವಾಗಿ ತಿಳಿಸಿದ್ದಾರೆ.

ಪ್ರತಿಭೆ ಕಡಿಮೆ ಇರುತ್ತದೆ. ರಾಜ ಹೇಳಿದಷ್ಟು ಮಾತ್ರ ಮಾಡುತ್ತಾನೆ. ತನ್ನ ಪ್ರತಿಭೆಯಿಂದ ಹೆಚ್ಚಿಗೆ ಮಾತನಾಡುವುದೇ ಇಲ್ಲ. ಮಾಡುವುದೂ ಇಲ್ಲ. ಹೆಚ್ಚಿನ ಯಾವ ಗೊಡವೆಗೂ ಹೋಗುವುದಿಲ್ಲ. ತಾನಾಗಿಯೇ ಯಾವುದನ್ನೂ ನಿರ್ಧರಿಸುವುದಿಲ್ಲ. ಆದರೆ ರಾಜನ ಕಾರ್ಯವನ್ನು ಕೆಡಿಸುವುದಿಲ್ಲ. ಕಾರ್ಯವನ್ನು

ಸಾಧಿಸುತ್ತಾನೆ. ಅವನು ಮಿತಾರ್ಥನಾಮಕ ದೂತನೆನಿಸುತ್ತಾನೆ. ಈ ದೂತ ಉತ್ತಮನಲ್ಲ. ನಿಸೃಷ್ಟಾರ್ಥದೂತನಂತೆ ಪ್ರಜ್ಞಾವಂತನಾಗಿರುವುದಿಲ್ಲ. ಆದರೆ ಕಾರ್ಯಸಾಧಕನಾಗಿರುತ್ತಾನೆ. ಆದ್ದರಿಂದ ಮಧ್ಯಮದೂತ ಎನಿಸುತ್ತಾನೆ. ಮಂತ್ರಿಗಳಿಗೆ ಇರಬೇಕಾದ ಗುಣಗಳಲ್ಲಿ ಚತುರ್ಥಾಂಶಹೀನನಾಗಿರುತ್ತಾನೆ.

### ೩. ಶಾಸನಹರ ದೂತ

ಯಜಮಾನನ ಶಾಸನವನ್ನು ಕೊಂಡೊಯ್ಯುವವನು ಶಾಸನಹರ ಎನಿಸುತ್ತಾನೆ. ಈ ದೂತ ಉತ್ತಮದೂತನಲ್ಲಿಯ ಅರ್ಧಗುಣಗಳಿಂದ ಹೀನನಾಗಿರುತ್ತಾನೆ.

**३) शासनहरत्वलक्षणं तृतीयमधमम् ।**

**अर्धगुणहीनः शासनहरः – अर्थशास्त्रे ।**

**यावद्भाषितसन्देशहरः सन्देशहारकः ।। सा.द.३-४९**

ಯಜಮಾನನ ಸಂದೇಶಗಳನ್ನಷ್ಟೇ ತಲುಪಿಸುತ್ತಾನೆ. ಸ್ವಯಂ ತಾನು ಯಾವ ಮಾತುಗಳನ್ನೂ ಆಡುವುದಿಲ್ಲ. ಯಾವ ಕಾರ್ಯಗಳನ್ನೂ ಮಾಡಲು ಅವನಿಗೆ ಆಗುವುದಿಲ್ಲ. ಉತ್ತಮದೂತನಲ್ಲಿಯ ಅರ್ಧಗುಣಗಳು ಮಾತ್ರ ಇವನಲ್ಲಿ ಇರುತ್ತವೆ. ಯಜಮಾನನ ಶಾಸನಗಳನ್ನು ಮಾತ್ರ ತಲುಪಿಸುತ್ತಾನೆ. ಆದ್ದರಿಂದ ಇವನು ಶಾಸನಹರ ಎನಿಸುತ್ತಾನೆ. ಇವನು ಅಧಮದೂತ.

**हनूमति तु निसृष्टार्थत्वरूपमनिकृष्टमेव दूतत्वं नितिष्ठतीति निश्चप्रचम् ।**

ಹನುಮಂತದೇವರು ಮಾತ್ರ ರಾಮಚಂದ್ರನಿಗೆ ನಿಸೃಷ್ಟಾರ್ಥ ದೂತನಾಗಿದ್ದಾನೆ. ಉತ್ತಮದೂತನೇ ಆಗಿದ್ದಾನೆ. ಈ ವಿಷಯದಲ್ಲಿ ಯಾವುದೇ ವಿಧವಾದ ಸಂದೇಹವಿಲ್ಲ.*

---

* प्रेषणं सन्धिपालत्वं प्रतापो मित्रसङ्ग्रहः । उपजापः सुहृद्भेदः गूढदण्डातिसारणम् । बन्धुरत्नापहरणं चारज्ञानं पराक्रमः । समाधिमोक्षो दूतस्य कर्मयोगस्य चाश्रयः । अर्थशास्त्र -१२-१६-३३,३४)

## ರಾಮಚಂದ್ರದೇವರ ಸಂದೇಶಗಳನ್ನು ಎಲ್ಲರಿಗೂ ತಲುಪಿಸುತ್ತಾರೆ

**१) न केवलं रामस्य सन्देशं सीतां निनायेति रामस्य दूतः । अपि तु रामस्य सन्देशं आज्ञाप्रकारं श्रुतिस्मृत्युक्तं सर्वानपि देवादीन् प्रति नयति अवतारत्रयेण इति रामस्य दूतः ।**

ರಾಮನ ಸಂದೇಶವನ್ನು ಸೀತೆಗೆ ಒಯ್ದು ಮುಟ್ಟಿಸಿದರು. ಈ ಕಾರಣಕ್ಕಾಗಿ ಮಾತ್ರ ಹನುಮಂತದೇವರು ರಾಮನ ದೂತರೆಂದು ತಿಳಿಯುವುದು ಪರಿಪೂರ್ಣವಲ್ಲ. ವಾಯುದೇವರು ಹನುಮಂತ-ಭೀಮ-ಮಧ್ವ ಎಂಬ ಮೂರು ಅವತಾರಗಳನ್ನು ತಾಳುತ್ತಾರೆ. ಸ್ಮೃತಿ-ಶ್ರುತ್ಯುಕ್ತವಾದ ಭಗವಂತನ ಸಂದೇಶಗಳನ್ನು ಭಾರತೀದೇವಿಯನ್ನು ಮೊದಲು ಮಾಡಿ ತೃಣಪರ್ಯಂತ ಎಲ್ಲ ಜೀವರಾಶಿಗಳಿಗೆ ತಲುಪಿಸುತ್ತಾರೆ. ಆದ್ದರಿಂದ ಹನುಮಂತದೇವರು ಉತ್ತಮದೂತರಾಗಿದ್ದಾರೆ.

## ರಾಮಾಯಣವನ್ನು ಎಲ್ಲರಿಗೆ ತಲುಪಿಸಿದ ದೂತರು

**२) अथवा रामस्य=प्रतिपदकतासम्बन्धेन रामवतः रामायणस्य दूतं सन्देशहारकम् । अर्श आद्यच् । सर्वदा किम्पुरुषखण्डे रामायणोपदेशं करोतीति प्रसिद्धम् । मध्वावतारेऽपि तात्पर्यनिर्णयमुखेन रामायणसन्देशप्रापकत्वमस्ति ।**

ಅಥವಾ ರಾಮ ಎಂಬ ಶಬ್ದಕ್ಕೆ ರಾಮಾಯಣ ಎಂದು ಅರ್ಥ ತಿಳಿಯಬೇಕು. ರಾಮಃ ಅಸ್ಯ ಅಸ್ತೀತಿ ರಾಮಂ ರಾಮಾಯಣಂ. ರಾಮಚಂದ್ರ ಯಾವ ಗ್ರಂಥಕ್ಕೆ ವಿಷಯನಾಗಿರುವನೋ, ರಾಮಚಂದ್ರ ಯಾವ ಗ್ರಂಥದಿಂದ ಪ್ರತಿಪಾದ್ಯನಾಗಿರುವನೋ ಆ ರಾಮಾಯಣಗ್ರಂಥವೂ ರಾಮ ಎನಿಸುತ್ತದೆ. ಅಂಥ ರಾಮಾಯಣದ ದೂತರಾಗಿದ್ದಾರೆ ಹನುಮಂತದೇವರು. ಅಂದರೆ ರಾಮಾಯಣದ ಸಂದೇಶವನ್ನು ಸಮಸ್ತಜಗತ್ತಿಗೆ ತಲುಪಿಸಿದ್ದಾರೆ. ಈಗಲೂ ಕಿಂಪುರುಷಖಂಡದಲ್ಲಿದ್ದು ರಾಮಾಯಣಾದಿಸಂದೇಶಗಳನ್ನು ಹಾಡುತ್ತ ರಾಮಾಯಣದ ಸೇವೆ ಮಾಡುತ್ತಲೇ ಇದ್ದಾರೆ. ಆದ್ದರಿಂದ ಹನುಮಂತದೇವರು ರಾಮಾಯಣದ ದೂತರು ಎಂದು ತಿಳಿಯಬೇಕು.

## ಎಲ್ಲ ಭಕ್ತರ ಪ್ರಾರ್ಥನೆಗಳನ್ನು ಈಡೇರಿಸುವ ದೂತರು

**३) यद्वा, रामस्य=रामातिप्रियत्वात् रामशब्दबोध्यस्य रामभक्तसमुदायस्य दूतम् । अत्र दूतत्वं तत्तत्प्रार्थिकृत्त्वरूपं द्वितीयं विवक्षितम् । सकलरामभक्ताभीष्टानि साधयन्तमिति यावत् ।**

ಹನುಮಂತದೇವರು ರಾಮನ ಆಜ್ಞೆಯನ್ನು ಪಾಲನೆ ಮಾಡುತ್ತಾರೆ. ಆದ್ದರಿಂದ ಒಂದು ರೀತಿಯ ದೂತತ್ವವನ್ನು ಇಲ್ಲಿಯ ತನಕ ತಿಳಿದಿದ್ದೇವೆ. ಈಗ ಮತ್ತೊಂದು ರೀತಿಯಾದ ದೌತ್ಯವನ್ನು ತಿಳಿಯಬೇಕು.

ಸಣ್ಣವರ ಪ್ರಾರ್ಥನೆಯನ್ನು ಈಡೇರಿಸುವ ದೌತ್ಯ ಮತ್ತೊಂದು ರೀತಿಯಾಗಿದೆ. ಆ ದೌತ್ಯ ದೇವರಲ್ಲಿ ಇದೆ. ಹಾಗೆಯೇ ವಾಯುದೇವರಲ್ಲಿಯೂ ಆ ದೌತ್ಯವಿದೆ. ಅದನ್ನೂ ಇಲ್ಲಿ ತಿಳಿಯಬೇಕು.

ಆದರೆ ಇಲ್ಲಿ ಒಂದು ಸಮಸ್ಯೆ ಇದೆ. ಅದೇನೆಂದರೆ, ಹನುಮಂತದೇವರು ಸಣ್ಣವರ ಪ್ರಾರ್ಥನೆಯನ್ನು ಈಡೇರಿಸುತ್ತಾರೆ. ಆದ್ದರಿಂದ ಸಣ್ಣವರಿಗೆ ದೂತರಾಗಿದ್ದಾರೆ ಎಂದು ಹೇಳಬಹುದು. ಆದರೆ ಪ್ರಕೃತ **ರಾಮಸ್ಯ ದೂತಂ** ಎಂದು ಹೇಳಿದ್ದಾರೆ. ಹಾಗಾದರೇ ರಾಮಚಂದ್ರದೇವರ ಪ್ರಾರ್ಥನೆಗಳನ್ನು ಕೂಡಾ ಹನುಮಂತದೇವರು ಈಡೇರಿಸುತ್ತಾರೆ ಎಂದು ಹೇಳಬೇಕಾಗುತ್ತದೆ. ಆವಾಗ ಹನುಮಂತನಿಗಿಂತಲೂ ರಾಮಚಂದ್ರ ಚಿಕ್ಕವನು ಎಂದು ಹೇಳಿದಂತೆ ಆಗುತ್ತದೆ. ಶಾಂತಂ ಪಾಪಂ. ಇದಕ್ಕಿಂತಲೂ ಘೋರವಾದ ಪಾಪ ಮತ್ತೊಂದಿಲ್ಲ.

ಆದ್ದರಿಂದ ಸಣ್ಣವರ ಪ್ರಾರ್ಥನೆಯನ್ನು ಈಡೇರಿಸುವುದರಿಂದ ಯಾವ ದೌತ್ಯವಿದೆಯೋ ಆ ದೌತ್ಯ ಹನುಮಂತದೇವರಿಗೆ ಇದೆ ಎಂದು ತಿಳಿಯುವುದು ಹೇಗೆ? ಎಂದು ಶಂಕಿಸಬಾರದು. ಇಲ್ಲಿ ರಾಮ ಎಂಬ ಶಬ್ದಕ್ಕೆ ರಘುರಾಮ ಎಂದು ಅರ್ಥವಲ್ಲ. ರಾಮಭಕ್ತರು ಎಂದು ಅರ್ಥ. ರಾಮನು ಯಾರಿಗೆ ಸ್ವಾಮಿಯಾಗಿರುವನೋ ಅಂಥವರು ಎಂದು ಅರ್ಥ. ಅಂಥವರು ನಿಶ್ಚಿತವಾಗಿಯೂ ರಾಮದೂತರೇ ಆಗಿದ್ದಾರೆ. ಪ್ರಕೃತ ರಾಮ ಎಂಬ ಶಬ್ದದಿಂದ ರಾಮಭಕ್ತರು ಎಂಬ ಅರ್ಥವನ್ನು ತಿಳಿಯಬೇಕು.

ಮತ್ತೊಂದು ರೀತಿಯಾಗಿಯೂ ರಾಮ ಎಂದರೆ ರಾಮಭಕ್ತರು ಎಂದು ತಿಳಿಯಬಹುದು. ಅತಿಶಯವಾದ ಪ್ರೀತಿ ಇದ್ದಾಗ ಅಭೇದ ಹೇಳುವ ರೂಢಿ ಇದೆ. ''ಮಮಾತ್ಮಾ ಭದ್ರಸೇನಃ'' ''ಐಕಾತ್ಮ್ಯಮಾಗತಂ ವಿದ್ಧಿ ಪಾಂಡವೈಃ ಧರ್ಮಸಂಶ್ರಯೈಃ'' ಮುಂತಾದ ವಚನಗಳು ಈ ವಿಷಯದಲ್ಲಿ ಪ್ರಮಾಣವಾಗಿವೆ. ಹೀಗಾಗಿ ರಾಮ ಎಂದರೆ ರಾಮನಿಗೆ ಅತ್ಯಂತಪ್ರಿಯರಾದ ರಾಮಭಕ್ತರು ಎಂದು ಅರ್ಥ.

ರಾಮಭಕ್ತರು ಎಂಬ ಅರ್ಥದಲ್ಲಿಯ ರಾಮಶಬ್ದ ಬಹುವಚನದಲ್ಲಿ ಇರಬೇಕಿತ್ತು. ಪ್ರಕೃತ ಸಮುದಾಯಾರ್ಥದಲ್ಲಿ ಏಕವಚನ ಎಂದು ತಿಳಿಯಬೇಕು. ರಾಮಭಕ್ತರೆಲ್ಲರೂ ಏಕಮನಸ್ಕರಾಗಿರುತ್ತಾರೆ ಎಂದು ಸೂಚಿಸುವುದಕ್ಕಾಗಿ ಏಕವಚನಪ್ರಯೋಗ ಎಂದು ತಿಳಿಯಬೇಕು.

ಇಂಥ ರಾಮಭಕ್ತರ ಸಮುದಾಯಕ್ಕೆ ಹನುಮಂತದೇವರು ದೂತರಾಗಿದ್ದಾರೆ. ಅಂದರೆ ರಾಮಭಕ್ತರ ಪ್ರಾರ್ಥನೆಗಳನ್ನೆಲ್ಲ ಪೂರ್ಣಮಾಡಲು ಸಿದ್ಧರಾಗಿದ್ದಾರೆ ಹನುಮಂತದೇವರು. ಸಕಲರಾಮಭಕ್ತರ ಅಭೀಷ್ಟಗಳನ್ನು ಸಾಧಿಸುತ್ತಾರೆ. ಆದ್ದರಿಂದ ರಾಮಭಕ್ತರ ದೂತ ಹನುಮಂತ ಎಂತಲೂ ತಿಳಿಯಬೇಕು.

## ಭಕ್ತರ ಸಂದೇಶಗಳನ್ನು ಭಗವಂತನಿಗೆ ತಲುಪಿಸುವ ದೂತರು

**४) यद्वा, रामस्य=रामभक्तसमुदायस्य दूतं भगवन्तं प्रति प्रार्थनारूपसन्देशहरम् ।**

ಅಥವಾ ಹಿಂದೆ ತಿಳಿದಂತೆ ರಾಮ ಎಂದರೆ ರಾಮಭಕ್ತ ಎಂಬ ಅರ್ಥವನ್ನು ತಿಳಿಯಬೇಕು. ಹನುಮಂತದೇವರು ರಾಮಭಕ್ತರ ದೂತರಾಗಿದ್ದಾರೆ. ಅಂದರೆ ರಾಮಭಕ್ತರ ಸಂದೇಶಗಳನ್ನು ರಾಮಚಂದ್ರನಿಗೆ ತಲುಪಿಸುತ್ತಾರೆ. ಆದ್ದರಿಂದ ಹನುಮಂತದೇವರು ರಾಮಭಕ್ತರ ದೂತರು ಎಂದು ತಿಳಿಯಬಹುದು.

ರಾಮಭಕ್ತರ ಅಪೇಕ್ಷಿತಗಳು ಅನೇಕ. ಹಲವರಿಗೆ ಭಕ್ತಿ ಬೇಕು, ಹಲವರಿಗೆ ಜ್ಞಾನ. ಕೆಲವರಿಗೆ ವೈರಾಗ್ಯ. ಮತ್ತು ಕೆಲವರಿಗೆ ಮುಕ್ತಿ. ಹೀಗೆ ರಾಮಭಕ್ತರ ಬೇಡಿಕೆಗಳು ನಾನಾವಿಧ. ಆ ಎಲ್ಲ ಬೇಡಿಕೆಗಳನ್ನು ನಾವಾಗಿಯೇ ಸಾಕ್ಷಾತ್ತಾಗಿ ಶ್ರೀರಾಮಚಂದ್ರನಿಗೆ ಕೇಳಿದರೆ ಉಪಯೋಗವಿಲ್ಲ. ನಮ್ಮ ಯಾವ ಮಾತನ್ನೂ

ಶ್ರೀರಾಮಚಂದ್ರ ಕೇಳುವುದೇ ಇಲ್ಲ. ನಮ್ಮ ಪ್ರಾರ್ಥನೆಗಳನ್ನು, ನಮ್ಮ ಅಪೇಕ್ಷಿತಗಳನ್ನು, ನಮ್ಮ ಸಂದೇಶಗಳನ್ನು ಹನುಮಂತದೇವರೇ ಶ್ರೀರಾಮನಿಗೆ ತಲುಪಿಸಬೇಕು. ''ದೀನಂ ದೂನಂ ಅನಾಥಂ ಶರಣಾಗತಂ ಏನಂ ಉದ್ಧರ'' ಎಂದು ಹನುಮಂತದೇವರೇ ವಿಜ್ಞಾಪನೆ ಮಾಡಿಕೊಳ್ಳಬೇಕು. ರಾಮಭಕ್ತರಾದ ನಮ್ಮೆಲ್ಲರ ಸಂದೇಶಗಳನ್ನು ರಾಮಚಂದ್ರನಿಗೆ ತಲುಪಿಸುತ್ತಾರೆ. ಆದ್ದರಿಂದ **ರಾಮಸ್ಯ ದೂತಂ** ಹನುಮಂತದೇವರು ರಾಮಭಕ್ತರ ದೂತರಾಗಿದ್ದಾರೆ ಎಂಬ ಅರ್ಥವನ್ನು ಪ್ರಕೃತ ತಿಳಿಯಬೇಕು.

## ಸೀತೆಯ ದೂತರು ಹನುಮಂತದೇವರು

**೯) यद्वा, रामस्य=रामायाः सीतायाः दूतं तत्सन्देशहरमित्यर्थः । माया(लक्ष्म्य)वतारभूतायाः सीतायाः पुंवच्छक्तिमत्वात् पुलिङ्गप्रयोगः । सीताकृतौ इन्द्रस्य प्रवेशात् तद्विवक्षया वा पुलिङ्गप्रयोगः । सीताकृतौ सीतायाः, इन्द्रस्य च सत्वे ''तस्यास्तु तां प्रतिकृतिं प्रविवेश शक्रः देव्याश्च सन्निधियुतां व्यवहारसिद्ध्यै'' इति निर्णयवचनं प्रमाणभावं भजते ।**

ಅಥವಾ ರಾಮಸ್ಯ ರಾಮಾಯಾಃ ಸೀತಾಯಾಃ ದೂತಂ ಎಂಬುದಾಗಿ ಅನ್ವಯ ಮಾಡಿಕೊಳ್ಳಬೇಕು. ರಾಮಾ ಎಂದರೆ ಸೀತಾದೇವಿ ಎಂದು ಅರ್ಥ. ರಾಮನ ಸಂದೇಶಗಳನ್ನು ಸೀತೆಗೆ ತಲುಪಿಸಿದಂತೆ, ಸೀತೆಯ ಸಂದೇಶವನ್ನು ಕೂಡಾ ರಾಮನಿಗೆ ತಲುಪಿಸಿದ್ದಾರೆ ಹನುಮಂತದೇವರು. ಆದ್ದರಿಂದ ರಾಮನ ದೂತರಾದ ಹನುಮಂತದೇವರು ಸೀತೆಯ ದೂತರೂ ಆಗಿದ್ದಾರೆ.

## ರಾಮಸ್ಯ ಎಂದು ಪುಲ್ಲಿಂಗ ಯಾಕೆ?

ಎಲ್ಲ ಸರಿ. ಆದರೆ ರಾಮಾಯಾಃ ಎಂದು ಇಲ್ಲಿ ಇಲ್ಲವೇ ಇಲ್ಲ. ರಾಮಸ್ಯ ಎಂದು ಪುಲ್ಲಿಂಗ ಇದೆಯಲ್ಲವೇ? ಚಿಂತೆ ಬೇಡ. ಇದು ಸಮಸ್ಯೆಯೇ ಅಲ್ಲ. ಪುರುಷರಾದ ವಾಯುದೇವರಿಗಿಂತಲೂ ಅಧಿಕವಾದ ಶಕ್ತಿ ಸೀತಾದೇವಿಗೆ ಇದೆ. ಆದ್ದರಿಂದ ಪುಲ್ಲಿಂಗಪ್ರಯೋಗವು ಯುಕ್ತವೆಂದು ತಿಳಿಯಬೇಕು.

ರಾಮನ ಪತ್ನಿಯಾದ ಸೀತೆಯು ಲಂಕೆಯಲ್ಲಿ ಸಾಕ್ಷಾತ್ತಾಗಿ ಇರಲಿಲ್ಲ. ಅಲ್ಲಿ ಇದ್ದದ್ದು ಸೀತೆಯ ಆಕೃತಿ ಮಾತ್ರ. ಆ ಆಕೃತಿಗೆ ಗಮನ ಮುಂತಾದ ವ್ಯವಹಾರಗಳು ಸಿದ್ಧವಾಗಬೇಕೆಂದು ಇಂದ್ರನು ಸ್ವಯಂ ಆ ಆಕೃತಿಯಲ್ಲಿ ಪ್ರವಿಷ್ಟನಾದ. ಈ ಮೂಲಕ ರಾಮ-ಸೀತೆಯರ ಸೇವೆಯನ್ನು ಮಾಡಿದ. ಹನುಮದಭಿವಂದನಾದಿ ವ್ಯಾಪಾರಗಳ ಸಿದ್ಧಿಗಾಗಿ ಸ್ವಯಂ ಸೀತಾದೇವಿಯೂ ಅಲ್ಲಿ ಸನ್ನಿಹಿತಳಾಗಿದ್ದಳು. ತಾತ್ಪರ್ಯನಿರ್ಣಯದಲ್ಲಿ ಈ ವಿಷಯವು ಉಕ್ತವಾಗಿದೆ. ಅಲ್ಲಿ ಪುರುಷನಾದ ಇಂದ್ರನಿದ್ದ ಎಂಬುದನ್ನು ತಿಳಿಸಲು **ರಾಮಸ್ಯ** ಎಂದು ಪುಲ್ಲಿಂಗಪ್ರಯೋಗ ಮಾಡಿದ್ದಾರೆ ಎಂದು ತಿಳಿಯಬೇಕು.

## ಮಾಯೆಯೇ ಸೀತಾ

ಇಲ್ಲಿ ''ಮಾಯಾವತಾರಭೂತಾಯಾಃ ಸೀತಾಯಾಃ ಪುಂವತ್ ಶಕ್ತಿಮತ್ತ್ವಾತ್ ಪುಲ್ಲಿಂಗಪ್ರಯೋಗಃ'' ಎಂದು ವ್ಯಾಖ್ಯಾನ ಇದೆ. ಇಲ್ಲಿ ಮಾಯಾವತಾರ-ಭೂತಾಯಾಃ ಎಂದು ಸುಮ್ಮನೇ ಹೇಳಿದ್ದಲ್ಲ. ಅದಕ್ಕೊಂದು ಉದ್ದೇಶವಿದೆ. ವಾಸುದೇವ,ಸಂಕರ್ಷಣ,ಪ್ರದ್ಯುಮ್ನ ಅನಿರುದ್ಧ ಎಂಬ ಭಗವಂತನ ರೂಪಗಳಲ್ಲಿ ವಾಸುದೇವನೇ ರಾಮನಾಗಿದ್ದಾನೆ. ವಾಸುದೇವ ರಾಮ ಎಂದ ಮೇಲೆ ಮಾಯಾದೇವಿಯೇ ಸೀತೆಯಾಗಬೇಕು. ಆದ್ದರಿಂದ ಮಾಯಾಪದಪ್ರಯೋಗ ಎಂದು ತಿಳಿಯಬೇಕು.

ಸೀತಾಕೃತಿಯಲ್ಲಿ ಸೀತೆಯ, ಇಂದ್ರನ ಆವೇಶ ಇದೆ ಎಂಬ ವಿಷಯದಲ್ಲಿ''ತಸ್ಯಾಸ್ತು ತಾಂ ಪ್ರತಿಕೃತಿಂ ಪ್ರವಿವೇಶ ಶಕ್ರಃ'' (೫.೩೮) ಎಂಬ ನಿರ್ಣಯದ ವಚನ ಪ್ರಮಾಣವಾಗಿದೆ.

## ಸುಖದಂ

**१) रामाज्ञया मोक्षसुखदम् । ''विष्णुर्हि दाता मोक्षस्य वायुश्च तदनुज्ञया''(ता.नि.१.७८) इत्युक्तेः ।**

ರಾಮದೇವರ ಆಜ್ಞೆಯಿಂದ ಮೋಕ್ಷಸುಖವನ್ನೇ ವಾಯುದೇವರು ಕೊಡುತ್ತಾರೆ. ಆದ್ದರಿಂದ ಸುಖದಂ ಮೋಕ್ಷಸುಖದಂ ಎಂದು ತಿಳಿದುಕೊಳ್ಳಬೇಕು. ''ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ'' ಎಂಬ ಪ್ರಮಾಣದಿಂದ ಈ ವಿಷಯವು ಸಿದ್ಧವಾಗಿದೆ. ಪ್ರಸಿದ್ಧವೂ ಆಗಿದೆ.

## २) तापत्रयं परिहृत्य ऐहिकसुखदम् ।

ತಾಪತ್ರಯವನ್ನು ಪರಿಹಾರ ಮಾಡಿ ಐಹಿಕಸುಖವನ್ನು ಕೊಡುತ್ತಾರೆ. ಆದ್ದರಿಂದಲೂ ಹನುಮಂತದೇವರು ಸುಖದರಾಗಿದ್ದಾರೆ.

ವಾಸ್ತವವಾಗಿ ಸುಖಭೋಕ್ತೃತ್ವವನ್ನು ಪರಮಾತ್ಮನೇ ಕೊಡುತ್ತಾನೆ. ಸುಖಭೋಕ್ತೃತ್ವವನ್ನು ಕೊಡುವ ಅಧಿಕಾರವನ್ನು ದೇವರು ರಮಾದೇವಿಗೂ ಬಿಟ್ಟು ಕೊಟ್ಟಿಲ್ಲ. ರಮೆಯಾಗಲೀ, ವಾಯುದೇವರಾಗಲೀ ಸುಖಕ್ಕೆ ಸಾಧನವಾದ ಇಂದ್ರಿಯಗಳನ್ನು ಪ್ರೇರಿಸುತ್ತಾರೆ. ಇಂದ್ರಿಯಗಳಿಗೆ ಶಕ್ತಿಯನ್ನು ಕೊಡುತ್ತಾರೆ. ಅಷ್ಟೇ. ಅಂತತೋ ಗತ್ವಾ ಸುಖಭೋಕ್ತೃತ್ವವನ್ನು ಮಾತ್ರ ದೇವರೇ ನೀಡುತ್ತಾನೆ. ''ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ । ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ'' (೧೩.೨೧) ಎಂಬ ಗೀತೆಯ ವಚನದಿಂದ ಈ ವಿಷಯವು ಸಿದ್ಧವಾಗಿದೆ. ಉಚ್ಚತ್ವಾನುಸಂಧಾನವನ್ನು ದೇವರು ನೀಡುವಾಗ ರಮಾದೇವಿಯಾಗಲೀ ವಾಯುದೇವರಾಗಲೀ ಕೈಕಟ್ಟಿ ನಿಂತಿರುತ್ತಾರೆ. ಅಷ್ಟೇ. [1]ಸುಖಭೋಕ್ತೃತ್ವವನ್ನು ನೀಡುವಲ್ಲಿ ಲಕ್ಷ್ಮೀದೇವಿಗೆ ಅಲ್ಪಪ್ರವೃತ್ತಿ ಇದೆ. ಅಧಿಕಪ್ರವೃತ್ತಿ ಇಲ್ಲ. ವಾಯುದೇವರಿಗೆ ಅಲ್ಪಪ್ರವೃತ್ತಿಯೂ ಇಲ್ಲ.

[2]ಸುಖಭೋಕ್ತೃತ್ವವನ್ನು ವಾಯುದೇವರು ಕೊಡದಿದ್ದರೂ, ಸುಖಕರ್ತೃತ್ವ ವಾಯುದೇವರಿಗೆ ಇದೆ. ಮನಃಪರಿಣಾಮರೂಪವಾದ ಸುಖಕ್ಕೆ

---

१. परमेश्वरस्यैव सर्वकर्तृत्वेऽपि भोक्तृत्वदाने देव्या अल्पप्रवृत्तिरिति दर्शयितुं उच्यते इति स्थानद्वयेऽप्युक्तम् ।।गी.ता.१३.२१।।

२. कार्यकारणकर्तृत्वे कारणं प्रकृतिं विदुः ।
भोक्तृत्वे सुखदुःखानां पुरुषः प्रकृतेः परः ।।भाग.३.२७.९।।
भा.ता- सुखदुःखप्रदो विष्णुः स्वयमेव सनातनः ।
कर्तृत्वं सुखदुःखानामन्येषां तु तदाज्ञया ।
भोक्तृत्वं सुखदुःखानां करोत्येको हरिः स्वयम् ।
भोक्तृत्वमात्रहेतुत्वं जीवे नाऽन्यत्र कुत्रचित् ।। इति भविष्यत्पर्वणि
यादु– अन्येषां च अन्येषामपि श्रीब्रह्मादीनां जीवगतसुखदुःखकर्तृत्वं तदाज्ञयैव न स्वातन्त्र्येण । तथाऽपि यत्सर्वजीवगतं सुखदुःखानां भोक्तृत्वं तद्धरिः स्वयमेक एव करोति । अतस्तस्य प्रकृतिपरत्वं युक्तमित्याशयः ।

ರಮಾದೇವಿಯರು, ವಾಯುದೇವರು ಕರ್ತೃಗಳಾಗಿದ್ದಾರೆ. ಭಾಗವತದ, ಮೂರನೆಯ ಸ್ಕಂಧದ, ಇಪ್ಪತ್ತೇಳನೆಯ ಅಧ್ಯಾಯದ, ಒಂಭತ್ತನೆಯ ಶ್ಲೋಕದಲ್ಲಿ ಈ ವಿಷಯವು ಉಕ್ತವಾಗಿದೆ. ಆ ಶ್ಲೋಕದ ತಾತ್ಪರ್ಯದಲ್ಲಿ ಮತ್ತು ಯಾದುಪತ್ಯವ್ಯಾಖ್ಯಾನದಲ್ಲಿಯೂ ವಿಸ್ತಾರವನ್ನು ಕಾಣಬಹುದು. ಈ ಅಭಿಪ್ರಾಯದಿಂದಲೇ ವಾಯುದೇವರು ಸುಖದರಾಗಿದ್ದಾರೆ ಎಂದು ವ್ಯಾಸರಾಜರು ಹೇಳುತ್ತಿದ್ದಾರೆ.

ವಾಯುದೇವರು ಸುಖವನ್ನು ಕೊಡುತ್ತಾರೆ ಎಂದು ಮುಂದೆಯೂ ಹೇಳಲಾಗಿದೆ. ಆ ಸಂದರ್ಭದಲ್ಲಿಯೂ ವಾಯುದೇವರು ಸುಖಕರ್ತೃಗಳಾಗಿ-ದ್ದಾರೆ ಎಂದೇ ತಿಳಿಯಬೇಕು.

ಅಂತೂ ವಾಯುದೇವರು ತಾಪತ್ರಯಗಳನ್ನು ಪರಿಹರಿಸುತ್ತಾರೆ. ಸುಖವನ್ನು ನೀಡುತ್ತಾರೆ. ಆದ್ದರಿಂದ ಸುಖದರಾಗಿದ್ದಾರೆ.

**३) सर्वेन्द्रियप्रेरकत्वात् सर्वैः ज्ञानेन्द्रियैः ज्ञानानि उत्पाद्य तद्द्वारा सुखदम् ।**

ಜ್ಞಾನ ಇದ್ದಾಗ ಮಾತ್ರ, ಸುಖವು ತೋರುತ್ತದೆ. ಜ್ಞಾನ ಇಲ್ಲದಿದ್ದರೆ ಜೀವನದಲ್ಲಿ ಸುಖ ತೋರುವುದೇ ಇಲ್ಲ. ಕಣ್ಣಿನಿಂದ ರೂಪವನ್ನು ತಿಳಿದಾಗ ಆನಂದವಾಗುತ್ತದೆ. ರಸನೇಂದ್ರಿಯದಿಂದ ರಸವನ್ನು ತಿಳಿದಾಗ ಸುಖವಾಗುತ್ತದೆ. ಘ್ರಾಣೇಂದ್ರಿಯದಿಂದ ಗಂಧವನ್ನು ತಿಳಿದಾಗ ಸಂತೋಷವಾಗುತ್ತದೆ. ಹೀಗೆಯೇ ಸ್ಪರ್ಶೇಂದ್ರಿಯದಿಂದ ಸ್ಪರ್ಶ ಇತ್ಯಾದಿಗಳನ್ನು ತಿಳಿದಾಗಲೇ ಸುಖವಾಗುತ್ತದೆ. ಕಣ್ಣು ಮುಂತಾದ ಇಂದ್ರಿಯಗಳಿಂದ ರೂಪಾದಿಗಳನ್ನು ತಿಳಿಯದಿದ್ದರೆ ಸುಖವಾಗುವುದೇ ಇಲ್ಲ. ಜ್ಞಾನೇಂದ್ರಿಯಗಳಲ್ಲಿದ್ದು ಜ್ಞಾನವನ್ನು ಉತ್ಪಾದನೆ ಮಾಡಿ ಸುಖವನ್ನು ಕೊಡುವವರು ವಾಯುದೇವರೇ. ಆದ್ದರಿಂದ ವಾಯುದೇವರನ್ನು **ಸುಖದಂ** ಎಂದು ಸ್ತುತಿಸುವುದು ಸಮುಚಿತವೇ ಆಗಿದೆ.

**४) शास्त्रवाक्यार्थानुभवजनितमहानन्ददम्, भक्त्यादि-लाभजनितमहानन्ददश्च । सौम्यगुणाभिमानित्वोक्तेः एकादशतात्पर्ये । सौम्यशब्दस्य निरुक्तार्थत्वं तद्व्याख्याने श्रीनिवासतीर्थीये उपलभ्यते ।**

೧. ಶಾಸ್ತ್ರಗಳನ್ನು ಅಧ್ಯಯನ ಮಾಡುವಾಗ, ಶಾಸ್ತ್ರಗಳಲ್ಲಿಯ ವಾಕ್ಯಾರ್ಥದ ಜ್ಞಾನ ಆದಾಗ ಆನಂದವಾಗುತ್ತದೆ. ಆ ಆನಂದ ಇತರ ಆನಂದಗಳಿಗಿಂತಲೂ ವಿಲಕ್ಷಣವಾಗಿರುತ್ತದೆ. ಆ ಆನಂದಕ್ಕೆ ವಾಯುದೇವರು ಅಭಿಮಾನಿಗಳಾಗಿದ್ದಾರೆ.

೨. ''ನನಗೆ ಇಂದು ಸದ್ಗುರುಗಳ ಸಮಾಗಮವಾಗಿದೆ. ಅವರನ್ನು ಸೇವಿಸುವ ಸೌಭಾಗ್ಯ ನನಗೆ ಒದಗಿ ಬಂದಿದೆ. ಅವರ ಉಪದೇಶದ ಲಾಭ ನನಗಾಗುತ್ತದೆ. ಆ ಉಪದೇಶದಿಂದ ನನ್ನಲ್ಲಿಯ ಜ್ಞಾನ-ಭಕ್ತಿ-ವೈರಾಗ್ಯಗಳು ಅಭಿವೃದ್ಧವಾಗುತ್ತವೆ. ಇನ್ನು ಮುಂದೆ ನನಗೆ ಮುಕ್ತಿಯು ನಿಶ್ಚಿತ. ನನ್ನ ಜನ್ಮಜನ್ಮಾಂತರಗಳ ಪುಣ್ಯವು ಇವತ್ತು ಫಲಿಸಿದೆ'' ಇಂಥ ಸಂತೋಷ ಸಾಧಕನಿಗೆ ಆಗುತ್ತದೆ. ಈ ಆನಂದಾನುಭವವು ಎಲ್ಲ ಗುಣಗಳಲ್ಲಿ ಉತ್ತಮವಾಗಿದೆ. ಈ ಆನಂದಾನುಭವ ಸೌಮ್ಯನಾಮಕ ವಾಗಿದೆ. ಈ ಆನಂದಕ್ಕೆ ವಾಯುದೇವರು ಅಭಿಮಾನಿಗಳಾಗಿದ್ದಾರೆ. ಈ ಆನಂದವನ್ನು ವಾಯುದೇವರು ಕೊಡುತ್ತಾರೆ. ಆದ್ದರಿಂದ ಸುಖದಂ ಎಂದು ವಾಯುದೇವರನ್ನು ಸ್ತುತಿಸುವುದು ಸಮುಚಿತವಾಗಿದೆ.

**५) रामस्य दूतं सीतां प्रति सन्देशहरं अत एव रामस्य रामायाः सीतायाः सुखदम् । रामस्य रामायाः सीतायाः दूतं रामं प्रति सन्देशहरं अत एव रामस्य सुखदम् इति वा ।**

ಹನುಮಂತದೇವರು ಎಲ್ಲರಿಗೂ ಸುಖವನ್ನು ನೀಡುತ್ತಾರೆ ಎಂದು ಸಾಮಾನ್ಯವಾಗಿ ತಿಳಿದಾಯಿತು. ಈಗ ಸೀತಾದೇವಿಗೆ ಸುಖವನ್ನು ನೀಡಿದರು ಎಂದು ವಿಶೇಷವಾಗಿ ತಿಳಿಸುತ್ತಿದ್ದಾರೆ.

ರಾಮಸ್ಯ ದೂತಂ, ಸೀತಾಂ ಪ್ರತಿ ರಾಮಸ್ಯ ಸಂದೇಶಹರಂ ಎಂದು ಹಿಂದೆ ತಿಳಿದಾಯಿತು. ಅತ ಏವ ರಾಮಸ್ಯ ಸುಖದಂ ರಾಮಸ್ಯ ರಾಮಾಯಾಃ ಸೀತಾಯಾಃ ಸುಖದಂ. ಎಂದು ಪ್ರಕೃತ ತಿಳಿಯಬೇಕು.

ಹನುಮಂತದೇವರು ರಾಮಚಂದ್ರದೇವರ ಸಂದೇಶವನ್ನು ಸೀತಾದೇವಿಗೆ ತಲುಪಿಸುತ್ತಾರೆ. ಆದ್ದರಿಂದ ರಾಮನ ದೂತರು ಎಂದು ಹಿಂದೆ ತಿಳಿದಾಯಿತು. ಆದ್ದರಿಂದಲೇ ಹನುಮಂತದೇವರು ಸೀತಾದೇವಿಗೆ ಸುಖವನ್ನು ನೀಡುತ್ತಾರೆ ಎಂದು ಪ್ರಕೃತ ಅರ್ಥವನ್ನು ತಿಳಿಯಬೇಕು.

ಹಾಗೆಯೇ ಸೀತಾದೇವಿಯ ಸಂದೇಶವನ್ನು ರಾಮಚಂದ್ರನಿಗೆ ತಲುಪಿಸಿದ್ದಾರೆ. ತನ್ಮೂಲಕ ಹನುಮಂತದೇವರು ರಾಮಚಂದ್ರದೇವರಿಗೂ ಸುಖವನ್ನು ನೀಡಿದ್ದಾರೆ ಎಂದೂ ತಿಳಿಯಬಹುದು. ಇದೇನು? ರಾಮದೇವರಿಗೆ ಹನುಮಂತದೇವರು ಸುಖ ನೀಡುತ್ತಾರೆಯೇ? ಅಲ್ಲ. ಅಲ್ಲ. ರಾಮನ ಸುಖಕ್ಕೆ ರಮೆಯೂ ಕಾರಣ ಆಗಲಾರಳು. ಹನುಮಂತ ದೇವರು ರಾಮನ ಸುಖಕ್ಕೆ ಹೇಗೆ ಕಾರಣ ಆದಾರು? ಹಾಗಾದರೆ ರಾಮಸ್ಯ ಸುಖದಂ ಏನಿದರ ಅರ್ಥ.

ಇದರ ಅರ್ಥ ಇಷ್ಟೇ. ಹನುಮಂತದೇವರು ಸೀತೆಯ ಸಂದೇಶವನ್ನು ರಾಮಚಂದ್ರದೇವರಿಗೆ ತಲುಪಿಸುತ್ತಾರೆ. ಈ ಮೂಲಕ ರಾಮಚಂದ್ರದೇವರ ನಿತ್ಯಾಭಿವ್ಯಕ್ತವಾದ ಸುಖ ವ್ಯಕ್ತವಾಗುವಂತೆ ಮಾಡುತ್ತಾರೆ ಎಂದಿಷ್ಟೇ ತಾತ್ಪರ್ಯ. ಹನುಮಂತದೇವರು ಮಾಡಿದ ಅತ್ಯಂತ ಉನ್ನತವಾದ ಸೇವೆ ಇದಾಗಿದೆ.

## ರಾಮಭಕ್ತರಿಗೆ ಸುಖದರು

**६) रामस्य रामभक्तस्य वा सुखदम् ।**

ರಾಮಸ್ಯ ಸುಖದಂ ರಾಮಭಕ್ತಸ್ಯ ಸುಖದಂ. ಹಿಂದೆ ತಿಳಿದಂತೆ ರಾಮ ಎಂದರೆ ರಾಮಭಕ್ತ ಎಂದು ಅರ್ಥ. ರಾಮರಿಗೆ ಅಂದರೆ ರಾಮಭಕ್ತರಿಗೆ ಸುಖವನ್ನು ನೀಡುತ್ತಾರೆ. ಆದ್ದರಿಂದ ರಾಮಸ್ಯ ಸುಖದಂ ಎಂದು ಹನುಮಂತದೇವರನ್ನು ಸ್ತುತಿಸಿದ್ದಾರೆ.

## ದುಷ್ಟರ ಸುಖವನ್ನು ನಾಶಮಾಡುತ್ತಾರೆ

**७) रः रामः ''रश्च रामेऽनिले'' इत्यभिधानात् । तं प्रत्यमति गच्छतीति रामः रामस्य प्रतिगामी शत्रुरिति यावत् । रामस्य रामशत्रोः रावणादेः सुखदं सुखनाशकं सुखं द्यति इति व्युत्पत्तेः । ''दो अवखण्डने'' इति हि धातुः ।**

ರಂ ಪ್ರತಿ ಅಮತಿ ಗಚ್ಛತಿ ಇತಿ ರಾಮಃ. **ರ+ಅಮ=ರಾಮ.** ರ=ರಾಮಚಂದ್ರದೇವರು, **ಅಮ**=ಅಂಥ ರಾಮನನ್ನು ಕುರಿತು ರಾಮನಿಗೆ ಎದುರಾಗಿ ಯುದ್ಧಕ್ಕೆ ಹೋಗುತ್ತಾರೆ. ಆದ್ದರಿಂದ ರಾಮ ಎಂದರೆ

ರಾಮಚಂದ್ರದೇವರ ಶತ್ರುಗಳು ಎಂದು ಅರ್ಥ. ಹಿಂದೆ ರಾಮ ಎಂದರೆ ರಾಮನ ಭಕ್ತರು ಎಂಬ ಅರ್ಥವನ್ನು ತಿಳಿದಿದ್ದೆವು. ಈಗ ಆದಕ್ಕೆ ವಿಪರೀತವಾಗಿ ರಾಮನ ಶತ್ರುಗಳು ಎಂಬ ಅರ್ಥವನ್ನು ತಿಳಿಯಬೇಕು. ಅಂಥ ರಾಮನ ಶತ್ರುಗಳಿಗೆ ಸುಖದರಾಗಿದ್ದಾರೆ ಹನುಮಂತದೇವರು. ಅಂದರೆ ಅವರಿಗೆ ಸಂತೋಷ ಕೊಡುತ್ತಾರೆ ಎಂದು ಅರ್ಥ ಅಲ್ಲ. ಕಿಂತು ರಾಮನ ಶತ್ರುಗಳ ಸುಖವನ್ನು **ದ್ಯತಿ** ನಾಶಮಾಡುತ್ತಾರೆ. ಆದ್ದರಿಂದ **ರಾಮಸ್ಯ ಸುಖದಂ** ಎಂದು ತಿಳಿಯಬೇಕು.

## ಯೋಗ್ಯರಿಗೆ ಸು-ಖ-ದ ಆಗಿದ್ದಾರೆ

**೮) रं सुखं अमति गच्छति अवगच्छतीति रामः सुखानुभविता। असाधारण्येन व्यपदेशात् स्वरूपसुखानुभवयोग्यः सुजीवोऽत्र गृह्यते । तस्य सुखदं शोभनानि च तानि खानि च सुखानि शास्त्रानुसारि-प्रवृत्तिभाञ्जि इन्द्रियाणि, तानि ददातीति । सम्प्रदानत्वं न विवक्षागोचरः ।**

ಅಥವಾ ರ ಎಂದರೆ ಸುಖ ಎಂದು ಅರ್ಥ. **ರಂ** ಸುಖವನ್ನು **ಅಮತಿ** ಅವಗಚ್ಛತಿ ಅನುಭವಿಸುತ್ತಾನೆ ಅಂಥ ವ್ಯಕ್ತಿ ರಾಮ ಎನಿಸುತ್ತಾನೆ. ''ಅಸಾಧಾರಣ್ಯೇನ ವ್ಯಪದೇಶಾಃ ಭವಂತಿ'' ಎಂಬ ನಿಯಮದಿಂದ ರಾಮ ಎಂದರೆ ಸ್ವರೂಪಸುಖವನ್ನು ಅನುಭವಿಸಲು ಯೋಗ್ಯನಾದ ಮುಕ್ತಿಯೋಗ್ಯನಾದ ವ್ಯಕ್ತಿ ಎಂದು ಅರ್ಥ.

ಇಂಥ ಮುಕ್ತಿಯೋಗ್ಯರಿಗೆ ಹನುಮಂತದೇವರು ಸುಖದರಾಗಿದ್ದಾರೆ. ಸು-ಖ-ದಂ **ಸು**=ಶೋಭನವಾದ, **ಖ**=ಇಂದ್ರಿಯಗಳನ್ನು, **ದ**=ನೀಡುತ್ತಾರೆ. ಸ್ವರೂಪಸುಖವನ್ನು ಮುಂದೆ ಅನುಭವಿಸುವ ಅಂದರೆ ಮುಕ್ತಿಯೋಗ್ಯರಾದ ಜೀವರಾಶಿಗಳ ಇಂದ್ರಿಯಗಳಿಗೆ ಸಮೀಚೀನವಾದ ಪ್ರವೃತ್ತಿಯನ್ನು ನೀಡುತ್ತಾರೆ. ಆದ್ದರಿಂದ ರಾಮಸ್ಯ ಸುಖದಂ ಎಂದು ಸ್ತುತಿಸುತ್ತಿದ್ದಾರೆ.

ಮುಕ್ತಿಯೋಗ್ಯರಾದವರಿಗೆ ಸ್ವರೂಪಸುಖವನ್ನು ಮುಂದೆ ಕೊಡುತ್ತಾರೆ. ಈಗ ಅವರ ಶ್ರೋತ್ರಾದಿ ಇಂದ್ರಿಯಗಳಿಗೆ ಸಮೀಚೀನವಾದ ಪ್ರವೃತ್ತಿಯನ್ನು ನೀಡುತ್ತಾರೆ ಎಂದು ಅರ್ಥ. ಪರಮಾತ್ಮನ ಸೇವೆಗೆ ಉಪಯುಕ್ತವಾಗುವಂಥ

ಇಂದ್ರಿಯಗಳನ್ನು ನಮಗೆ ಕೊಡುತ್ತಾರೆ. ಆದ್ದರಿಂದ ಸು=ಖ=ದಂ ಎಂದು ಹೇಳಿದ್ದಾರೆ.

ಕೊಡುವುದು ಎಂಬ ಅರ್ಥವನ್ನು ಹೇಳುವಾಗ ಚತುರ್ಥೀವಿಭಕ್ತಿಯು ಬಂದು ರಾಮಾಯ ಸುಖದಂ ಎಂದಾಗಬೇಕಾಗಿತ್ತು. ರಾಮಸ್ಯ ಸುಖದಂ ಎಂದು ಹೇಗಾಯಿತು ಎಂದು ಶಂಕೆ. ಇಲ್ಲಿ ಸಂಪ್ರದಾನತ್ವವನ್ನು ವಿವಕ್ಷಾ ಮಾಡಿಲ್ಲ. ಆದ್ದರಿಂದ ರಾಮಾಯ ಎಂದು ಚತುರ್ಥೀ ಬಂದಿಲ್ಲ. ಸಂಬಂಧ ಸಾಮಾನ್ಯದಲ್ಲಿ ಷಷ್ಠೀ ಬಂದು ರಾಮಸ್ಯ ಎಂದಾಗಿದೆ.

**९) रामस्य रामभक्तस्य वा सुखदं समीचीनेन्द्रियदम् ।**

ಅಥವಾ ರಾಮಸ್ಯ=ರಾಮಭಕ್ತರಿಗೆ, ಸು=ಖ=ದಂ ಸಮೀಚೀನವಾದ ಇಂದ್ರಿಯಗಳನ್ನು ನೀಡುವವರು ಎಂದೂ ಅರ್ಥ ತಿಳಿಯಬೇಕು.

## ರಾಮನ ಧ್ಯಾನಕ್ಕೆ ಮೀಸಲಾದ ಮನಸ್ಸು

**१०) रामस्य सु=ख=दम् । शोभनं भक्तिज्ञप्तिविरक्तिप्रभृतिगुण-ततिपूर्तिमत् च तत् खं हृदयाकाशं च सुखं तद्दम् । हृदयाकाशे स्वयमेव स्वातन्त्र्येण स्थितमपि रामभद्रं तत्त्वेन ध्यायन्तमिति यावत् ।**

ಅಥವಾ ರಾಮಸ್ಯ ಎಂಬುದನ್ನು ಸುಖದಂ ಎಂಬ ಪದದ ಜೊತೆಗೂ ಅನ್ವಯಿಸಿಕೊಳ್ಳಬೇಕು. ರಾಮಸ್ಯ ಸುಖದಂ. ಹನುಮಂತದೇವರು ರಾಮಚಂದ್ರದೇವರಿಗೂ ಸುಖದರಾಗಿದ್ದಾರೆ. ಗಾಬರಿ ಬೇಡ. ಸಮಾಧಾನ-ಚಿತ್ತರಾಗಿ ಮುಂದೆ ಓದಿರಿ.

**ಸು**=ಒಳ್ಳೆಯ, **ಖ**=ಆಕಾಶವನ್ನು, **ದ**=ರಾಮನಿಗಾಗಿ ಮೀಸಲಿಟ್ಟಿದ್ದಾರೆ ಹನುಮಂತದೇವರು. ರಾಮಚಂದ್ರದೇವರಿಗೆ ತಮ್ಮ ಹೃದಯಾಕಾಶವನ್ನು ಕೊಟ್ಟಿದ್ದಾರೆ. ಆದ್ದರಿಂದ ರಾಮಸ್ಯ ಸುಖದಂ ಎಂದು ವಾಯುದೇವರನ್ನು ಸ್ತುತಿಸುತ್ತಿದ್ದಾರೆ.

ಭಗವಂತ ಸರ್ವತ್ರ ವ್ಯಾಪ್ತನಾಗಿದ್ದಾನೆ. ಹಾಗೆ ಹನುಮಂತದೇವರ ಹೃದಯದಲ್ಲಿಯೂ ನೆಲೆಸಿದ್ದಾನೆ. ಸ್ವತಃ ರಾಮನ ನೆಲೆಯೇ ಆದ ಹೃದಯವನ್ನು

ರಾಮನಿಗೆ ಕೊಡುವುದೆಂದರೆ ಏನು? ಮತ್ತೇನೂ ಇಲ್ಲ. ಹನುಮಂತದೇವರು ತಮ್ಮ ಹೃದಯದಲ್ಲಿ ಸರ್ವದಾ ದೇವರನ್ನು ಚಿಂತಿಸುತ್ತಾರೆ ಎಂದು ಅರ್ಥ.

ನಮ್ಮ ಮನೆಯಲ್ಲಿ ದೇವರಿಗೆ ಅವಕಾಶ ಕೊಟ್ಟಿದ್ದೇವೆ. ಎಂದು ನಾವೆಲ್ಲರೂ ವ್ಯವಹಾರ ಮಾಡುತ್ತೇವೆ. ಇದರ ಅರ್ಥವೇನು? ಮೊದಲು ದೇವರಿಗೆ ನಮ್ಮ ಮನೆಯಲ್ಲಿ ಅವಕಾಶವಿರಲಿಲ್ಲ. ಈಗ ಅವಕಾಶ ಮಾಡಿಕೊಟ್ಟಿದ್ದೇವೆಂದು ಅರ್ಥವೇ? ಅಲ್ಲ. ಸರ್ವತ್ರ ವ್ಯಾಪ್ತನಾಗಿದ್ದಾನೆ ಪರಮಾತ್ಮ. ಅಂಥ ಪರಮಾತ್ಮನ ಪ್ರತಿಮೆಗಳನ್ನು ನಮ್ಮ ಮನೆಯಲ್ಲಿ ಇಟ್ಟು ಕೊಂಡು ಪ್ರತಿನಿತ್ಯ ಪೂಜಿಸುತ್ತೇವೆ ಎಂದಿಷ್ಟೇ ಆ ಮಾತಿಗೆ ಅರ್ಥ. ಹಾಗೆಯೇ, ಹನುಮಂತದೇವರು ತಮ್ಮ ಮನಸ್ಸಿನಲ್ಲಿ ರಾಮಚಂದ್ರದೇವರಿಗೆ ಅವಕಾಶ ಕೊಟ್ಟಿದ್ದಾರೆ ಎಂದರೆ, ಪ್ರತಿಕ್ಷಣವೂ ದೇವರನ್ನು ತಮ್ಮ ಹೃದಯಗುಹೆಯಲ್ಲಿ ಚಿಂತಿಸುತ್ತಾರೆ ಎಂದು ತಾತ್ಪರ್ಯ.

''ಮತ್ಕರ್ಮಕೃತ್ ಮತ್ಪರಮಃ'' ಯಾರಿಗೆ ನಾನು ಪರಮ ಉತ್ತಮನಾಗಿದ್ದೇನೆಯೋ ಅವರು ನನ್ನ ಹತ್ತಿರ ಬರುತ್ತಾರೆ. ಎಂದು ಶ್ರೀಕೃಷ್ಣ ಹೇಳುತ್ತಾನೆ. ಅಂದರೆ ಏನರ್ಥ? ಕೆಲವರಿಗೆ ಮಾತ್ರ ದೇವರು ಉತ್ತಮ. ಕೆಲವರಿಗೆ ಉತ್ತಮ ಅಲ್ಲ ಎಂದು ಅರ್ಥವೇ? ಹಾಗಲ್ಲ. ದೇವರು ಎಲ್ಲರಿಗೂ ಉತ್ತಮನೇ ಆಗಿದ್ದಾನೆ. ಹಾಗಾದರೆ ಮತ್ಪರಮಃ ಎಂಬ ಮಾತಿನ ಅರ್ಥವೇನು? ಆ ಮಾತಿಗೆ ಇಷ್ಟೇ ಅರ್ಥ. ದೇವರು ಎಲ್ಲರಿಗೂ ಉತ್ತಮನಾಗಿದ್ದಾನೆ. ಆದರೆ ಯಾರು ದೇವರನ್ನು ಉತ್ತಮ ಎಂದು ಭಾವಿಸುವರೋ ಅವರು ಮತ್ಪರಮರು. ಅಂಥ ಮತ್ಪರಮರು ದೇವರ ಹತ್ತಿರ ಹೋಗುತ್ತಾರೆ ಎಂದು ತಾತ್ಪರ್ಯ.

ಹಾಗೆ ದೇವರಿಗೆ ಅವಕಾಶ ಕೊಡುವುದೆಂದರೆ, ಮನಸ್ಸಿನಲ್ಲಿ ದೇವರು ಇದ್ದಾನೆ ಎಂದು ತಿಳಿಯುವುದು. **ಸು** ಉತ್ತಮವಾದ **ಖ** ಹೃದಯಾಕಾಶವನ್ನು **ದ** ಪರಮಾತ್ಮನಿಗೆ ಬಿಟ್ಟು ಕೊಟ್ಟವರು. ಆ ಹೃದಯಾಕಾಶದಲ್ಲಿ ದೇವರ ಚಿಂತನೆಯನ್ನು ನಿತ್ಯವೂ ಮಾಡುವವರು ಎಂದು ಅರ್ಥ. ಹಾಗೆ ಹನುಮಂತದೇವರು ರಾಮಸ್ಯ ಸುಖದರಾಗಿದ್ದಾರೆ.

ಹನುಮಂತದೇವರು ತಮ್ಮ ಎದೆಯನ್ನು ತೆಗೆದು, ಅಲ್ಲಿ ಸೀತಾ-ರಾಮರನ್ನು ತೋರಿಸುವ ಚಿತ್ರವನ್ನು ಅನೇಕ ಕಡೆಗೆ ನೋಡುತ್ತೇವೆ. ಅದು ಇದೇ ಉದ್ದೇಶದಿಂದ ಎಂದು ತಿಳಿಯಬೇಕು.

**ಖದ** ಇಷ್ಟು ಶಬ್ದ ಸಾಕು. ರಾಮಚಂದ್ರದೇವರಿಗೆ ತಮ್ಮ ಹೃದಯಾಕಾಶವನ್ನು ನೀಡಿದ್ದಾರೆ ಎಂಬ ಅರ್ಥ ಸಿದ್ಧವಾಗುತ್ತದೆ. ಮತ್ತೆ ಸು ಏನು? ಸು ಎಂಬ ಶಬ್ದ ಯಾಕೆ ಬೇಕು. ಆ ಶಬ್ದ ವ್ಯರ್ಥವಲ್ಲವೇ?

ಸರ್ವಥಾ ವ್ಯರ್ಥವಲ್ಲ. **ಸು** ಎಂದರೆ ಚೆನ್ನಾಗಿ ಇರುವುದು ಎಂದು ಅರ್ಥ. ಮನೆಯನ್ನು ಸ್ವಚ್ಛಮಾಡುತ್ತೇವೆ. ಆವಾಗ ಆ ಮನೆ ಶೋಭನ ವಾಗುತ್ತದೆ. ಆ ಮನೆಯನ್ನು ನೋಡಿದವರು ಮನೆ ಚೆನ್ನಾಗಿದೆ ಎಂದು ಹೇಳುತ್ತಾರೆ. ಹಾಗೆ ಹೃದಯಾಕಾಶವನ್ನು ಸ್ವಚ್ಛವಾಡಿಕೊಳ್ಳಬೇಕು. ಅಲ್ಲಿಯ ಕಾಮ-ಕ್ರೋಧಾದಿಗಳೆಂಬ ಕಸವನ್ನು ತೆಗೆದು ಹಾಕಬೇಕು. ಅಲ್ಲಿ ಜ್ಞಾನ-ಭಕ್ತಿ-ವೈರಾಗ್ಯಗಳನ್ನು ತುಂಬಬೇಕು. ಆವಾಗ ಆ ಮನಸ್ಸು ಸು ಆಗುತ್ತದೆ. ಶೋಭನವಾಗುತ್ತದೆ. ಅಂಥ ಮನಸನ್ನು ಜ್ಞಾನಿಗಳು ನೋಡುತ್ತಾರೆ. ಇವನ ಹೃದಯ ತುಂಬ ಚೆನ್ನಾಗಿದೆ ಎಂದು ಹೇಳುತ್ತಾರೆ.

ಇಂಥ **ಸು**=ಶೋಭನವಾದ **ಖ**=ಹೃದಯಾಕಾಶದಲ್ಲಿ ಭಗವಂತನನ್ನು ನಿರಂತರ ಚಿಂತಿಸುತ್ತಾರೆ. ಆದ್ದರಿಂದ ಹನುಮಂತದೇವರನ್ನು **ರಾಮಸ್ಯ ಸುಖದಂ** ಎಂದು ಸಮುಚಿತವಾದ ರೀತಿಯಲ್ಲಿ ಸ್ತುತಿಸುತ್ತಿದ್ದಾರೆ.

## ವಾತ್ಸಲ್ಯದಿಂದ ತುಂಬಿದ ಹೃದಯ

**११) रामस्य रामभक्तस्य सुखदं, उषितुमवकाशप्रदम् । हृदये वा अवकाशदं सर्वदा तद्धितचिन्तकमिति यावत् । चशब्दः अनुक्तविशेषणसहस्रसमुच्चायकः ।**

ರಾಮಸ್ಯ ಎಂದರೆ ಹಿಂದೆ ತಿಳಿದಂತೆ ರಾಮಭಕ್ತಸ್ಯ ಎಂದು ಅರ್ಥ. ಸು=ಖ=ದಂ ರಾಮಭಕ್ತರಿಗೆ **ಸು** ಒಳ್ಳೆಯ **ಖ** ಇರಲು ಅವಕಾಶವನ್ನು **ದ** ಕೊಟ್ಟಿದ್ದಾರೆ ಹನುಮಂತದೇವರು. ಆದ್ದರಿಂದ ರಾಮಸ್ಯ ಸುಖದಂ.

ವಾಸಕ್ಕಾಗಿ ಪ್ರತಿಯೊಬ್ಬರಿಗೂ ಮನೆ ಇದೆ. ಆ ಮನೆಯನ್ನು ವಾಯುದೇವರೇ ನಮಗೆ ನೀಡಿದ್ದಾರೆ. ಅಥವಾ ನಮಗೆಲ್ಲ ತಮ್ಮ ಹೃದಯಾಕಾಶದಲ್ಲಿ ಸ್ಥಲ ಕೊಟ್ಟಿದ್ದಾರೆ. ಆದ್ದರಿಂದ ವಾಯುದೇವರನ್ನು **ರಾಮಸ್ಯ ಸುಖದಂ** ಎಂದು ಸ್ತುತಿಸುತ್ತಿದ್ದಾರೆ.

ವಾಯುದೇವರು ತಮ್ಮ ಮನಸ್ಸಿನಲ್ಲಿ ದೇವರನ್ನು ಇಟ್ಟುಕೊಂಡಿದ್ದಾರೆ ಸರಿ. ನಮ್ಮನ್ನು ಯಾಕೆ ತಮ್ಮ ಮನಸ್ಸಿನಲ್ಲಿ ಇಟ್ಟುಕೊಳ್ಳುತ್ತಾರೆ?

ನಿಜ. ಸರಿಯಾದ ಶಂಕೆಯೇ. ಅವರ ಮನತುಂಬ ದೇವರೇ ಇದ್ದಾರೆ. ಆದರೂ ನಮಗೂ ಅವರ ಮನದಲ್ಲಿ ಅವಕಾಶ ಇದೆ. ನಮ್ಮನ್ನು ತಮ್ಮ ಮನಸ್ಸಿನಲ್ಲಿಟ್ಟುಕೊಳ್ಳುವುದೆಂದರೆ ನಮಗಾಗಿ ನಮ್ಮ ಒಳಿತಿಗಾಗಿ ದೇವರನ್ನು ಪ್ರಾರ್ಥಿಸುವುದು ಎಂದು ತಾತ್ಪರ್ಯ. ನಮಗೆ ಹಿತವಾಗಲಿ ಎಂದು ತಮ್ಮ ಹೃದಯದಲ್ಲಿ ಚಿಂತಿಸುತ್ತಾರೆ ಎಂದು ಅರ್ಥ. ವಾತ್ಸಲ್ಯದಿಂದ ಕರುಣೆಯಿಂದ ನಮ್ಮನ್ನು ನೆನಪಿಸಿಕೊಳ್ಳುತ್ತಾರೆ ಎಂದು ಅರ್ಥ. ಏನೇ ಇರಲಿ. ನಮ್ಮಂಥವರಿಗೂ ವಾಯುದೇವರು ತಮ್ಮ ಮನಸ್ಸಿನಲ್ಲಿ ಅವಕಾಶವನ್ನು ಕೊಟ್ಟಿದ್ದಾರೆ ಎಂಬುದು ವಾಸ್ತವ. ಹೀಗಾಗಿ **ರಾಮಸ್ಯ ಸುಖದಂ** ಎಂದು ಸ್ತುತಿಸುತ್ತಿದ್ದಾರೆ.

ಸುಖದಂ ಚ ಸುರದ್ರುಮಂ ಎಂಬಲ್ಲಿಯ ಚಕಾರ ವಾಯುದೇವರಲ್ಲಿ ಅನೇಕ ಗುಣಗಳಿವೆ ಎಂಬುದನ್ನು ತಿಳಿಸುತ್ತದೆ. ಶ್ರುತಿ-ಸ್ಮೃತಿಗಳ ಮೂಲಕ ಆ ಗುಣಗಳನ್ನು ತಿಳಿಯಬೇಕು.

## ಹರಿಯನ್ನು ಸ್ವಾಮಿಯನ್ನಾಗಿಸಿಕೊಂಡವರು

**१२) सुखदो विष्णुः । "अनन्तो हुतभुग् भोक्ता सुखदो नैकजोऽग्रजः" इति वैष्णवे पदसहस्रतये । सोऽस्यास्ति स्वामित्वेन इति सुखदः । अर्श आद्यच्, तम् ।**

ಅಥವಾ ಸುಖದ ಎಂದರೆ ಪರಮಾತ್ಮ ಎಂದು ಅರ್ಥ. "ಸುಖದೋ ನೈಕಜೋಽಗ್ರಜಃ" ಎಂದು ಸಹಸ್ರನಾಮವೇ ಈ ವಿಷಯದಲ್ಲಿ ಪ್ರಮಾಣವಾಗಿದೆ. ಅಂಥ ಸುಖದನಾದ ಪರಮಾತ್ಮನನ್ನು ಸ್ವಾಮಿಯಾಗಿ ಪಡೆದ ವಾಯುದೇವರು ಕೂಡಾ ಸುಖದರೆನಿಸುತ್ತಾರೆ.

## ಗಂಗೆ ವಾಯುದೇವರ ದಾಸಿ

**१३) सुखदा गङ्गा । "सुखदा मोक्षदा गङ्गा" इत्युक्तेः । साऽस्यास्ति भक्तत्वेनेति सुखदस्तम् । "भित्वा भुवं देवनदी जगाम**

शाखाविशेषेण निवेषिवतुं तम् । वाणी च यत्प्रेष्यतया कृतार्था शिवादिवन्द्या न तदत्र चित्रम्'' इति हि नारायणपण्डिताचार्याः अमण्डयन्त ।

ಅಥವಾ ''ಸುಖದಾ ಮೋಕ್ಷದಾ ಗಂಗಾ'' ಎಂಬ ಕೋಶಕ್ಕೆ ಅನುಗುಣವಾಗಿ ಸುಖದಾ ಎಂದರೆ ಗಂಗಾ ಎಂದು ಅರ್ಥ. ಅಂಥ ಗಂಗೆಯು ವಾಯುದೇವರ ದಾಸಿಯಾಗಿರುವುದರಿಂದ ವಾಯುದೇವರು ಸುಖದರೆನಿಸಿದ್ದಾರೆ. ಮಧ್ವವಿಜಯದಲ್ಲಿ ಈ ವಿಷಯವು ಪ್ರಸ್ತುತವಾಗಿದೆ.

### ರಾಮಸಿ ಅಸುಖದಂ ರಾಮಸ್ಯಸುಖದಂ

यद्वा, हे हनूमन् यतस्त्वं रामसि रामवदाचरसि अतो दूतं मत्प्रार्थितकृतं असुखदं अकारवाच्यवासुदेवावताररामंमोददं त्वां नमामि । ''अकारो वासुदेवः स्यात्'' इत्युक्तेः अकारो वासुदेववाची । वासुदेवावतारत्वाद्रामस्य अः रामः इत्यर्थः समपद्यत । तथाहि विष्णुधर्मोत्तरे–

दुष्टानां निग्रहार्थाय चतुर्मूर्तिर्जनार्दनः ।
जातो रघुकुले राजन् पुत्रो दशरथस्य तु ।
अंशेन वासुदेवस्य जातो रामो महायशाः ।।

तस्मादुक्तं न साधुताधूतम् ।

ಅಥವಾ ರಾಮಸ್ಯಸುಖದಂ ಎಂಬುದನ್ನು ರಾಮಸಿ ಅಸುಖದಂ ಎಂದು ಬಿಡಿಸಿಕೊಂಡು ಅರ್ಥವನ್ನು ತಿಳಿಯಬೇಕು. ಇಲ್ಲಿ ರಾಮಸಿ ಎಂಬುದು ಕ್ರಿಯಾಪದ. **ರಾಮಸಿ** ಹೇ ಹನುಮಂತದೇವರೇ ನೀವು ರಾಮದೇವರಂತೆ ಇದ್ದೀರಿ. ಆದ್ದರಿಂದಲೇ **ದೂತಂ** ನಮ್ಮ ದೂತರಾಗಿದ್ದೀರಿ. ಅರ್ಥಾತ್ ನಮ್ಮ ಪ್ರಾರ್ಥನೆಗಳನ್ನು, ನಮ್ಮ ಬಯಕೆಗಳನ್ನು ಈಡೇರಿಸುತ್ತೀರಿ.

ಅಸುಖದಂ ಅಕಾರವಾಚ್ಯನಾದ ವಾಸುದೇವರೂಪಿಯಾದ ಪರಮಾತ್ಮನ ಅವತಾರನಾದ ಶ್ರೀರಾಮಚಂದ್ರನಿಗೆ ಸುಖವನ್ನು ನೀಡುತ್ತೀರಿ. ರಾಮಚಂದ್ರ

ದೇವರ ಸುಖದ ಅಭಿವ್ಯಕ್ತಿಗೆ ಕಾರಣರಾಗುತ್ತೀರಿ ಎಂದು ತಾತ್ಪರ್ಯ. ಆದ್ದರಿಂದ ಹನುಮಂತದೇವರು ಅಸುಖದರಾಗಿದ್ದಾರೆ. ಹೀಗೆ ಹನುಮಂತದೇವರನ್ನು ತಿಳಿದವರ ಕಾರ್ಯಗಳು ನಿರ್ವಿಘ್ನವಾಗಿ ಸಂಪನ್ನವಾಗುತ್ತವೆ.

ವಾಸುದೇವನೇ ರಾಮನೆಂಬುದನ್ನು ವಿಷ್ಣುಧರ್ಮೋತ್ತರದಲ್ಲಿಯ ಈ ಪ್ರಮಾಣವು ಬೋಧಿಸುತ್ತದೆ.

**ದುಷ್ಟಾನಾಂ ನಿಗ್ರಹಾರ್ಥಾಯ ಚತುರ್ಮೂರ್ತಿರ್ಜನಾರ್ದನಃ ।**
**ಜಾತೋ ರಘುಕುಲೇ ರಾಜನ್ ಪುತ್ರೋ ದಶರಥಸ್ಯ ತು ।**
**ಅಂಶೇನ ವಾಸುದೇವಸ್ಯ ಜಾತೋ ರಾಮೋ ಮಹಾಯಶಾಃ ॥**

ದುಷ್ಟರನ್ನು ನಿಗ್ರಹಿಸುವುದು ಭಗವಂತನ ಉದ್ದೇಶ. ಅದಕ್ಕಾಗಿ ದಶರಥನ ಮಗನಾಗಿ ರಾಮನಾಮಕನಾಗಿ ಅವತರಿಸಿದ. ವಾಸುದೇವರೂಪಿಯಾದ ಪರಮಾತ್ಮನೇ ಶ್ರೀರಾಮನಾಗಿ ಅವತರಿಸಿದ್ದಾನೆ. ಹಾಗೆ ಅವತರಿಸಿದ ಶ್ರೀರಾಮ ಅತಿವಿಶಿಷ್ಟವಾದ, ದೇವ-ಮಾನುಷ ಅಸಾಧಾರಣವಾದ ಕಾರ್ಯಗಳನ್ನು ಸಾಧಿಸಿದ. ಚತುರ್ದಶಲೋಕಗಳಲ್ಲಿ ಕೀರ್ತಿಮಂತನಾದ.

## ಸುಖದ್ ಸುರದ್ರುಮಂ ಅಂಚ

**अथवा रामस्य दूतं त्वां नमामि भो हनूमन् । त्वं मदर्थे सुखद् सुखप्रदं सुरद्रुमं कल्पवृक्षवत् स्थितं परं ब्रह्म अञ्च पूजय गच्छ याचस्व च ।**

**सुखं ददातीत्यर्थे सुखोपपदाद् दा धातोः ड्विः, नपुंसकद्वितीयैकवचनम् । ''अञ्चु'' गतिपूजनयोः ''अञ्चु'' गतौ याचने च इति धात्वोः लोण्मध्यमैकवचनम् ''अञ्च'' इति । वायुर्यदा पूजयति तदैव तत्प्रेरिता वयं पूजयितुं प्रभवामः, अत इयं प्रार्थना । तथा, अस्माकं कृते स एष गत्वा यदि याचते तर्ह्येव अर्थाः सिद्ध्यन्ति नान्यथा । ''उन्नतप्रार्थिताशेषसंसाधकम्'' इि वाचःपतेः वागेतमेवार्थमवातिष्ठिपद्धि ।**

ಅಥವಾ **ಸುಖದಂಚ** ಎಂಬುದನ್ನು **ಸುಖದ್ ಅಂಚ** ಎಂಬುದಾಗಿ ಬಿಡಿಸಿಕೊಳ್ಳಬೇಕು. ಸುಖದ್ ಎಂಬುವುದು ದಕಾರಾಂತ ನಪುಂಸಕಲಿಂಗದ ಶಬ್ದ. (ತ್ವಂ ನೀನು, ಮದರ್ಥೇ ನನಗೋಸ್ಕರ) **ಸುಖದ್** ಸುಖಪ್ರದನಾದ **ಸುರದ್ರುಮಂ** ಕಲ್ಪವೃಕ್ಷದಂತಿರುವ ಪರಬ್ರಹ್ಮನಾದ ಶ್ರೀರಾಮಚಂದ್ರನನ್ನು **ಅಂಚ** ಪೂಜಿಸು.

''ನೀವು ಪೂಜೆ ಮಾಡುವಾಗ ನನಗಾಗಿಯೂ ಪೂಜೆ ಮಾಡಿರಿ'' ಹೀಗೆ ಕೆಲವರು ಪ್ರಾರ್ಥಿಸುತ್ತಾರೆ. ಹಾಗೆ ನಾವು ವಾಯುದೇವರಿಗೆ ಪ್ರಾರ್ಥಿಸಬೇಕು. ದೇವರ ಹತ್ತಿರ ಹೋಗುವ ಅಧಿಕಾರ ಹನುಮಂತದೇವರಿಗೆ ಮಾತ್ರ ಇದೆ. ದೇವರನ್ನು ಪೂಜಿಸುವ ಯೋಗ್ಯತೆಯೂ ವಾಯುದೇವರಿಗೆ ಇದೆ. ಆದ್ದರಿಂದ ನೀವು ದೇವರ ಹತ್ತಿರ ಹೋಗಿರಿ. ನನಗಾಗಿ ದೇವರನ್ನು ಪೂಜಿಸಿರಿ. ಅಥವಾ ನಮ್ಮಲ್ಲಿ ಸನ್ನಿಹಿತರಾಗಿರಿ. ನೀವೇ ದೇವರನ್ನು ಪೂಜಿಸಿರಿ. ''ದೀನಂ ದೂನಂ ಅನಾಥಂ ಶರಣಾಗತಂ ಏನಂ ಉದ್ಧರ'' ಎಂದು ನಮಗಾಗಿ ಪ್ರಾರ್ಥಿಸಿರಿ. ಎಂಬುದಾಗಿ ಹನುಮಂತದೇವರಲ್ಲಿ ಪ್ರಾರ್ಥಿಸಬೇಕು. ಸುಖದ್ ಅಂಚ ಎಂದು ಹೇಳುವ ಮೂಲಕ, ಈ ವಿಧವಾದ ಪ್ರಾರ್ಥನೆಯನ್ನು ಶ್ರೀವ್ಯಾಸತೀರ್ಥರು ಮಾಡುತ್ತಿದ್ದಾರೆ.

ವಾಯುದೇವರು ಪ್ರಾರ್ಥಿಸಿದಾಗಲೇ ನಮ್ಮ ಬೇಡಿಕೆಗಳು ಪೂರ್ಣವಾಗುತ್ತವೆ. ಉನ್ನತರು ಪ್ರಾರ್ಥನೆ ಮಾಡಿದಾಗಲೇ ಬಯಕೆಗಳು ಪೂರ್ಣವಾಗುತ್ತವೆ. ಇಲ್ಲದಿದ್ದರೆ ಇಲ್ಲ.

## ಸುರದ್ರುಮಮ್

**सुरद्रुमवदाचरतीति सुरद्रुमति । सुरद्रुमतीति सुरद्रुमः तम् । प्राज्ञप्रार्थितप्रदाने प्राज्ञप्रवेकपादपप्रकारम् । पुण्यवत्प्रार्थितान् अर्थान् यथा कल्पवृक्षः कल्पयते तथाऽयमपीति भावः ।**

ಪ್ರಾಜ್ಞರ ಪ್ರಾರ್ಥನೆಗಳನ್ನು ಪ್ರದಾನಮಾಡುವಲ್ಲಿ ಪ್ರಾಜ್ಞಪ್ರವೇಕಪಾದಪ-ದಂತೆ ಪ್ರಾಣದೇವರು ಇದ್ದಾರೆ.

ಕಂಡವರೆಲ್ಲರ ಅಭೀಷ್ಟಗಳನ್ನು ವಾಯುದೇವರು ಪೂರ್ಣಮಾಡುವುದಿಲ್ಲ. ಶ್ರೀರಾಮಭಕ್ತರ ಅಭೀಷ್ಟಗಳನ್ನು ಮಾತ್ರ ಪೂರ್ಣಮಾಡುತ್ತಾರೆ. ಹಾಗೆ

ಅಭೀಷ್ಟವನ್ನು ಪೂರ್ಣಮಾಡುವ ವಿಷಯದಲ್ಲಿ ದೇವತೆಗಳ ಕಲ್ಪವೃಕ್ಷದಂತೆ ವಾಯುದೇವರು ಇದ್ದಾರೆ. ಆದ್ದರಿಂದ ವಾಯುದೇವರನ್ನು ಸುರದ್ರುಮಂ ಎಂದು ವ್ಯಾಸರಾಜರು ಸ್ತುತಿಸಿದ್ದಾರೆ.

**ಪ್ರಾರ್ಥನೀಯರು ಸುರದ್ರುಮರು**

**''चते'' याचने इति धातोः चत्यते याच्यते इति चः स चासौ सुरद्रुमश्च तमित्येकं वा पदमनुसन्धेयम् ।**

ಅಥವಾ ಚಸುರದ್ರುಮಮ್ ಎಂಬುದು ಒಂದೇ ಪದವೆಂದು ತಿಳಿಯಬೇಕು. ''ಚತೇ ಯಾಚನೇ'' ಎಂಬ ಕ್ರಿಯಾಪದಕ್ಕೆ ಡ ಪ್ರತ್ಯಯವು ಬಂದು ಚ ಎಂಬ ರೂಪವು ಸಿದ್ಧವಾಗಿದೆ. ಚ ಎಂದರೆ ಪ್ರಾರ್ಥನೀಯ ಎಂದು ಅರ್ಥ. ವಾಯುದೇವರು ಎಲ್ಲರಿಂದಲೂ ಪ್ರಾರ್ಥನೀಯರಾಗಿದ್ದಾರೆ. ಸುರದ್ರುಮರಾಗಿಯೂ ಇದ್ದಾರೆ. ಹೀಗಾಗಿ **ಚಸುರದ್ರುಮರು** ವಾಯುದೇವರು.

ಕೆಲವರು ಸಮೃದ್ಧಿಯಿಂದ ಸಂಪನ್ನರಾಗಿರುತ್ತಾರೆ. ಕೇಳಿದವರಿಗೆ ಕೊಡುವ ಸ್ವಭಾವವೂ ಇರುತ್ತದೆ. ಆದರೆ ಅವರ ವ್ಯಕ್ತಿತ್ವವನ್ನು ನೋಡಿ ಅವರ ಹತ್ತಿರ ಹೋಗಲು ಮನಸ್ಸಾಗುವುದಿಲ್ಲ. ಅವರಿಗೆ ಏನನ್ನೂ ಪ್ರಾರ್ಥಿಸುವುದಿಲ್ಲ. ಏನನ್ನೂ ಬೇಡಲು ಮನಸ್ಸಾಗುವುದಿಲ್ಲ. ಹಾಗೆ ಅವರ ಸ್ವಭಾವ ಇರುತ್ತದೆ.

ಆದರೆ ವಾಯುದೇವರು ಹಾಗಲ್ಲ. ಅವರ ವ್ಯಕ್ತಿತ್ವ ಅಸಾಧಾರಣ. ಪರಿಶುಭ್ರವಾದ ಗುಣಗಳಿಂದ ವಾಯುದೇವರು ಸಂಪನ್ನರಾಗಿದ್ದಾರೆ. ನಿತ್ಯವಿಕಸಿತವಾದ ವ್ಯಕ್ತಿತ್ವ ವಾಯುದೇವರದ್ದು. ಅವರ ಮಹಿಮೆಯನ್ನು ಕೇಳಿದವರೆಲ್ಲರೂ ಅವರನ್ನು ಬೇಡಲು ಮುಂದಾಗುತ್ತಾರೆ. ಅವರನ್ನು ಪ್ರಾರ್ಥಿಸಲು ತವಕಿಸುತ್ತಾರೆ. ಭಾರತೀ-ರುದ್ರಾದಿದೇವತೆಗಳು ಪ್ರಾಣದೇವರನ್ನು ಬೇಡಲು ಸಾಲುಗಟ್ಟಿ ನಿಲ್ಲುತ್ತಾರೆ. ಸಂತಸದಿಂದ ಕಾಯುತ್ತಾರೆ. ವಾಯುದೇವರನ್ನು ಸಂತೋಷಪಡಿಸುತ್ತಾರೆ. ಇಷ್ಟಾರ್ಥಗಳನ್ನು ಪಡೆದು ಸಂತೃಪ್ತರಾಗುತ್ತಾರೆ. ಆದ್ದರಿಂದ **ಚಸುರದ್ರುಮ**=ಪ್ರಾರ್ಥನೀಯ ಕಲ್ಪವೃಕ್ಷವಾಗಿದ್ದಾರೆ ಪ್ರಾಣದೇವರು.

## ಕಲ್ಪವೃಕ್ಷ ವಾಯುದೇವರ ಮುಂದೆ ಅತ್ಯಲ್ಪ

चः गुणोच्चयरूपः स चासौ सुरद्रुमश्चेति वा । गुणानामुच्चयो यस्मात् स ''च'' इत्येव शब्दितः इत्यैतरेयभाष्योक्तेः । (ऐ.भा.द्वि.प्र. पञ्चमेऽध्याये) ।

ಕಲ್ಪವೃಕ್ಷದಲ್ಲಿಯ ಗುಣಗಳು ಅಲ್ಪ. ಅಷ್ಟೇ ಗುಣಗಳು ವಾಯುದೇವರಲ್ಲಿ ಇವೆ ಎಂದು ಅನುಸಂಧಾನ ಮಾಡುವುದು ಅನರ್ಥಕ್ಕೆ ಕಾರಣವಾಗುತ್ತದೆ.

ವಾಯುದೇವರು ಚ ಆಗಿದ್ದಾರೆ. ಚ ಎಂದರೆ ಗುಣಸಮುದಾಯಸ್ವರೂಪ ಎಂಬ ಅರ್ಥವನ್ನು ಐತರೇಯಭಾಷ್ಯವು ತಿಳಿಸಿದೆ.

ಈ ಶ್ಲೋಕದಲ್ಲಿ ವಾಯುದೇವರನ್ನು ಕಲ್ಪವೃಕ್ಷಕ್ಕೆ ಹೋಲಿಸಿದ್ದಾರೆ. ಹಾಗಂತ ಕಲ್ಪವೃಕ್ಷದಲ್ಲಿ ಇರುವಷ್ಟು ಗುಣಗಳೇ ವಾಯುದೇವರಲ್ಲಿ ಇವೆ ಎಂದು ತಿಳಿಯುವುದು ಸೂಕ್ತವಲ್ಲ. ವಾಯುದೇವರ ದೃಷ್ಟ್ಯಾ ಅತ್ಯಲ್ಪವಾದ ಗುಣಗಳು ಕಲ್ಪವೃಕ್ಷದಲ್ಲಿ ಇವೆ. ಕಲ್ಪವೃಕ್ಷಕ್ಕಿಂತಲೂ ಕೋಟಿ ಕೋಟಿ ಅಧಿಕವಾದ ಗುಣಗಳು ವಾಯುದೇವರಲ್ಲಿ ಇವೆ. ಗುಣಸಮುದಾಯಸ್ವರೂಪರಾಗಿದ್ದಾರೆ ಎಂದು ಹೇಳುವ ಚಶಬ್ದದಿಂದ ಈ ವಿಷಯವನ್ನು ತಿಳಿಸುತ್ತಿದ್ದಾರೆ.

ಹಾಗಾದರೆ ಸುರದ್ರುಮ ದೃಷ್ಟಾಂತ ಯಾಕೆ? ಸುರದ್ರುಮದೃಷ್ಟಾಂತ ಪೂರ್ಣದೃಷ್ಟಾಂತವಲ್ಲ. ಅಲ್ಪದೃಷ್ಟಾಂತ.

ಪರಮಾತ್ಮ ಗುಣಗಳ ಸಮುದಾಯ ರೂಪನಾಗಿದ್ದಾನೆ. ಆದ್ದರಿಂದ ಚಶಬ್ದದಿಂದ ವಾಚ್ಯನಾಗಿದ್ದಾನೆ. ಹಾಗೆ ವಾಯುದೇವರೂ ಗುಣೋಚ್ಚಯ-ರೂಪರಾಗಿದ್ದಾರೆ. ಆದ್ದರಿಂದ ಚಶಬ್ದವಾಚ್ಯರಾಗಿದ್ದಾರೆ. ಮತ್ತು ಸುರದ್ರುಮರೂ ಆಗಿದ್ದಾರೆ. ಆದ್ದರಿಂದ ವಾಯುದೇವರು ಚಸುರದ್ರುಮರು ಎಂದು ತಿಳಿಯಬೇಕು.

## ಸುರ ಮತ್ತು ದ್ರುಮರಾದ ವಾಯುದೇವರು

सुरश्चासौ द्रुमश्चेति वा ।

ವಾಯುದೇವರು ಸುರರೂ ಆಗಿದ್ದಾರೆ ದ್ರುಮರೂ ಆಗಿದ್ದಾರೆ ಆದ್ದರಿಂದ ಸುರದ್ರುಮರೆಂದು ತಿಳಿಯಬೇಕು.

**''षुर'' ऐश्वर्यदीप्त्योः कः । सुरति ईष्ट इति सुरः । महैश्वर्यवान् । ''धर्मविज्ञानवैराग्यपरमैश्वर्यशालिनः'' इत्युक्तेः ।**

ಷುರ ಎಂಬುದು ಕ್ರಿಯಾಪದ. ಅದಕ್ಕೆ ಐಶ್ವರ್ಯ ಮತ್ತು ದೀಪ್ತಿ ಎಂಬ ಅರ್ಥಗಳನ್ನು ಹೇಳಿದ್ದಾರೆ. ಹೀಗಾಗಿ ಸುರತಿ ಎಂದರೆ ಸಮರ್ಥರಾಗಿದ್ದಾರೆ ಎಂದು ಅರ್ಥ. ಸಮರ್ಥರಾಗಿರುವ ಕಾರಣಕ್ಕಾಗಿಯೇ ದೇವತೆಗಳನ್ನು ಸುರ ಎಂದು ಕರೆಯುತ್ತಾರೆ. ಐಶ್ವರ್ಯ ಇದ್ದ ಕಾರಣಕ್ಕಾಗಿ ದೇವತೆಗಳನ್ನು ಸುರ ಎಂದು ವ್ಯವಹರಿಸುತ್ತಾರೆ.

ಲಕ್ಷ್ಮೀ-ನಾರಾಯಣರನ್ನು ಬಿಟ್ಟು ಎಲ್ಲ ಪ್ರಪಂಚಕ್ಕೆ ವಾಯುದೇವರು ನಿಯಾಮಕರಾಗಿದ್ದಾರೆ. ಎಲ್ಲರಿಂದ ಎಲ್ಲವಿಧವಾದ ಕಾರ್ಯಗಳನ್ನು ಮಾಡಿಸಲು ಸಮರ್ಥರಾಗಿದ್ದಾರೆ. ಆದ್ದರಿಂದ ಸುರಶಬ್ದದಿಂದ ವಾಚ್ಯರಾಗಿದ್ದಾರೆ. **ಸುರತಿ** ಸಕಲಕಾರ್ಯಗಳನ್ನು ಮಾಡಲು ಸಮರ್ಥರಾಗಿದ್ದಾರೆ. ಮತ್ತು ಅತಿಶಯವಾದ ಐಶ್ವರ್ಯದಿಂದ ಸಂಪನ್ನರಾಗಿದ್ದಾರೆ. ಆದ್ದರಿಂದ ವಾಯುದೇವರು ಸುರರೆನಿಸುತ್ತಾರೆ.

**दीप्यते इति वा तेजोमयत्वात् ।**

ಅಥವಾ ದೀಪ್ತಿಮಂತರಾಗಿದ್ದಾರೆ. ತೇಜೋಮಯರಾಗಿದ್ದಾರೆ. ಆದ್ದರಿಂದಲೂ ವಾಯುದೇವರನ್ನು ಸುರ ಎಂದು ತಿಳಿಯಬಹುದು. ಸುರರೂ ಅಹುದು. ದ್ರುಮರೂ ಅಹುದು. ಆದ್ದರಿಂದ ವಾಯುದೇವರು ಸುರದ್ರುಮರೆನಿಸಿದ್ದಾರೆ.

**सुष्ठु राति ददात्यभीष्टमिति सुरः । ''रा'' दाने कः । सुष्ठु राजते ''राजृ'' दीप्तौ कः । सुनोति ''षुञ्'' अभिषवे, क्रन् औणादिकः । स हि यजमानादिषु स्थित्वा सोमं सुनोति । स्वयं च वेदोक्तसर्वयज्ञ-कर्तृत्वात् पवमानस्य युक्तमेतत् । द्रुमः विटपवज्जीववि(पक्षि)आश्रयः ।**

ಅಥವಾ ಸುಷ್ಠು ರಾತಿ ಇತಿ ಸುರಃ ಭಕ್ತರ ಅಭೀಷ್ಟಗಳನ್ನು ಚೆನ್ನಾಗಿ ಕೊಡುತ್ತಾರೆ ಆದ್ದರಿಂದ ಸುರ. ಅಥವಾ ಸುಷ್ಠು ರಾಜತೇ ಚೆನ್ನಾಗಿ ಶೋಭಿಸುತ್ತಾರೆ ಆದ್ದರಿಂದ ಸುರ.

''ಷುಞ್ ಅಭಿಷವೇ'' ಎಂಬ ಕ್ರಿಯಾಪದದಿಂದ ಸಿದ್ಧವಾದ ರೂಪ ಸುರ ಎಂಬುದು. ಯಜಮಾನರಲ್ಲಿದ್ದು ಯಜ್ಞಗಳನ್ನು ಮಾಡಿಸುತ್ತಾರೆ. ಸ್ವಯಂ ತಾವು ಅನಂತ ಯಜ್ಞಗಳನ್ನು ಮಾಡಿದ್ದಾರೆ. ಮಾಡುತ್ತಾ ಇದ್ದಾರೆ. ಮುಂದೆಯೂ ಮಾಡುತ್ತಾರೆ. ಆದ್ದರಿಂದ ಮುಖ್ಯಪ್ರಾಣದೇವರಿಗೆ **ಸುರ** ಎಂಬ ನಾಮ ಸಾರ್ಥಕವಾಗಿದೆ.

ಈ ವಾಯುದೇವರು ಸೋಮಸವನ ಮಾಡುತ್ತಾರೆ. ಆದ್ದರಿಂದ **ಸುರ**. ಹೀಗೆ ಸುರಶಬ್ದಕ್ಕೆ ಬೇರೇ ಅರ್ಥ ಮಾಡಿದಾಗ ದ್ರುಮಶಬ್ದಕ್ಕೂ ಬೇರೇ ಅರ್ಥ ಹೇಳಬೇಕು. ಆ ಅರ್ಥವೇನೆಂದರೆ, ದ್ರುಮವು ವೃಕ್ಷವು ಪಕ್ಷಿಗಳಿಗೆ ಆಶ್ರಯವಾಗಿದೆ. ಹಾಗೆಯೇ ಜೀವರೆಂಬ ಪಕ್ಷಿಗಳಿಗೆ ಆಶ್ರಯರಾಗಿದ್ದಾರೆ ವಾಯುದೇವರು. ಆದ್ದರಿಂದ ವಾಯುದೇವರು ದ್ರುಮರು ಎಂಬುದಾಗಿ ತಿಳಿಯಬೇಕು. ಒಟ್ಟಾರೆ ವಾಯುದೇವರು ಸುರರೂ ಆಗಿದ್ದಾರೆ. ದ್ರುಮರೂ ಆಗಿದ್ದಾರೆ. ಆದ್ದರಿಂದ ಸುರದ್ರುಮರೆನಿಸಿದ್ದಾರೆ.

## ಪೀನವೃತ್ತಮಹಾಬಾಹುಮ್

**१. पीनौ पुष्टौ दृढौ वृत्तौ वर्तुलौ महाबाहू यस्य तम् ।**

ವಾಯುದೇವರ ಬಾಹುಗಳು ಪರಿಪುಷ್ಟವಾಗಿವೆ. ದೃಢವಾಗಿವೆ. ಗುಂಡಾಗಿ ಇವೆ. ಅಂಥ ಮಹಾಬಾಹುಗಳುಳ್ಳವರು ವಾಯುದೇವರು.

**२) पीन पुष्टः वृत्तः दृढः महाबाहुः दीर्घबाहुः, प्रलम्बबाहुर्वा । पीनश्चासौ वृत्तश्चासौ महाबाहुश्च पीनवृत्तमहाबाहुः तम् । विशेषणमात्रघटितकर्मधारयः ।**

**अत्र दीर्घबाहुत्वकथनेन प्रलम्बबाहुत्वकथनेन वा सर्वजीवराजत्वं वायोः सूचितम् । तथाहि–**

**दीर्घबाहुर्भवेद्राजा समुद्रवचनं यथा ।**
**प्रलम्बबाहुरैश्वर्यं प्राप्नुयाद्गुणसंयुतम् ।।**

ಅಥವಾ ಸ್ವಯಂ ವಾಯುದೇವರು ಪುಷ್ಟರಾಗಿದ್ದಾರೆ. ದೃಢರಾಗಿ ಇದ್ದಾರೆ. ಮಹಾಬಾಹುಗಳುಳ್ಳವರಾಗಿದ್ದಾರೆ. ಆದ್ದರಿಂದಲೂ ಪೀನವೃತ್ತಮಹಾ-ಬಾಹುಗಳೆಂದು ತಿಳಿಯಬೇಕು.

ಸಮುದ್ರ ಹೇಳಿದ ಮಾತು ಹೀಗಿದೆ. ದೀರ್ಘಬಾಹುವಾದವನು ರಾಜನಾಗುತ್ತಾನೆ. ಪ್ರಲಂಬಬಾಹುವಾದವನು ಗುಣಸಂಯುಕ್ತವಾದ ಐಶ್ವರ್ಯವನ್ನು ಪಡೆಯುತ್ತಾನೆ.

ಪ್ರಕೃತ ವಾಯುದೇವರನ್ನು ಮಹಾಬಾಹು ಎಂದು ಸ್ತುತಿಸಿದ್ದಾರೆ. ಹೀಗೆ ಸ್ತುತಿಸುವ ಮೂಲಕ ವಾಯುದೇವರಲ್ಲಿ ರಾಜರಾಗುವ ಲಕ್ಷಣಗಳು, ಗುಣಸಂಯುಕ್ತವಾದ ಐಶ್ವರ್ಯವನ್ನು ಪಡೆಯುವ ಲಕ್ಷಣಗಳು ಪುಷ್ಕಲವಾಗಿವೆ ಎಂದು ತಿಳಿಸುತ್ತಿದ್ದಾರೆ. ತಿಳಿಸುವುದಿಷ್ಟೇ ಅಲ್ಲ. ವಾಯುದೇವರು ಸಕಲಜೀವರಾಜರಾಗಿರುವುದು ವಾಸ್ತವವೇ ಆಗಿದೆ.

**३) पीनाः पुष्टाः वृत्ताः सदाचारवन्तः यस्मात् स चासौ महाबाहुश्च । वृत्तशब्दात् सदाचारार्थाद् अर्श आद्यच् ।**

ವೃತ್ತ ಅಂದರೆ ಸದಾಚಾರ, ಸನ್ನಡತೆ ಎಂದು ಅರ್ಥ. **ವೃತ್ತಾಃ** ಸದಾಚಾರಿಗಳು. ಅವರೆಲ್ಲರೂ ಮುಖ್ಯಪ್ರಾಣದೇವರ ಅನುಗ್ರಹದಿಂದ ಸಂಪತ್ತಿನಿಂದಲೂ, ಧರ್ಮದಿಂದಲೂ ಪರಿಪುಷ್ಟರಾಗಿದ್ದಾರೆ. ಇನ್ನಿತರ ಸೌಭಾಗ್ಯಗಳಿಂದ ಮತ್ತು ಆಯುಷ್ಯದಿಂದಲೂ ಪುಷ್ಟರಾಗಿದ್ದಾರೆ. ಆ ವಾಯುದೇವರು ಸ್ವಯಂ ಮಹಾಬಾಹುಗಳಾಗಿದ್ದಾರೆ. ಆದ್ದರಿಂದ ವಾಯುದೇವರು ಪೀನವೃತ್ತಮಹಾಬಾಹುಗಳು ಎಂಬುದಾಗಿ ಚಿಂತಿಸಬೇಕು.

ಸದಾಚಾರಿಗಳು ದೀರ್ಘಾಯುಷಿಗಳಾಗುತ್ತಾರೆ. ಹೀಗೆಂದು ಭೀಷ್ಮರು ಧರ್ಮರಾಜನಿಗೆ ಉಪದೇಶಿಸುತ್ತಾರೆ. ಆ ಸದಾಚಾರಿಗಳಿಗೆ ವಾಯುದೇವರೇ ದೀರ್ಘಾಯುಷ್ಯವನ್ನು ಅನುಗ್ರಹಿಸುತ್ತಾರೆ. ಸದಾಚಾರದಿಂದ ತುಷ್ಟರಾದ ವಾಯುದೇವರು ಸಕಲರಿಗೂ ದೀರ್ಘಾಯುಷ್ಯರೂಪವಾದ ಪುಷ್ಟಿಯನ್ನು ಕೊಡುತ್ತಾರೆ. ಆದ್ದರಿಂದ ವಾಯುದೇವರು ಪೀನವೃತ್ತಮಹಾಬಾಹುಗಳಾಗಿದ್ದಾರೆ.

४) वृत्ताः धर्मेण न्यायेन परिपालनशीलाः च ते महाबाहवः क्षत्रियाश्च वृत्तमहाबाहवः, पीनाः पुष्टाः वृत्तमहाबाहवो यस्मात् । वृत्तशब्दादत्राप्यच् । वृत्तशब्दस्य निरुक्तार्थकत्वं रघुवंशे– ''किमत्र चित्रं यदि कामसूर्भूर्वृत्ते स्थितस्याधिपतेः प्रजानाम् ५.३३ ।।

ಅಥವಾ **ವೃತ್ತ** ಎಂದರೆ ಧರ್ಮ-ನ್ಯಾಯ ಅಂತ ಅರ್ಥ. ಧರ್ಮದಿಂದ, ನ್ಯಾಯದಿಂದ ರಾಜ್ಯವನ್ನಾಳುವ ಕ್ಷತ್ರಿಯರು ವೃತ್ತರು. ಭಗವಂತನ ಬಾಹುವಿನಿಂದ ಜನಿಸಿದ್ದರಿಂದ ಆ ಕ್ಷತ್ರಿಯರು ಮಹಾಬಾಹುಗಳು. **ವೃತ್ತಮಹಾಬಾಹವಃ** ಸದಾಚಾರಿಗಳಾದ ಕ್ಷತ್ರಿಯರೆಲ್ಲರೂ ವಾಯುದೇವರ ಅನುಗ್ರಹದಿಂದ ಪುಷ್ಟರಾಗಿದ್ದಾರೆ. ಆದ್ದರಿಂದಲೂ ವಾಯುದೇವರು ಪೀನವೃತ್ತಮಹಾಬಾಹುಗಳು.

५) वृत्तं सच्चारित्र्यमस्ति आसु इति वृत्ताः पतिव्रताः स्त्रियः । पीनाः सौमाङ्गल्यसौभाग्यादिना पुष्टाः वृत्ताः पतिव्रताः यस्मात् सः पीनवृत्तः, स चासौ महाबाहुश्च उक्तार्थे प्रयोगः- ''आपद्यपि सतीवृत्तं किं मुञ्चन्ति कुलस्त्रियः'' इति कथासरित्सागरे ।

ಅಥವಾ ವೃತ್ತ ಎಂದರೆ ಒಳ್ಳೆಯ ನಡತೆ, ಸಚ್ಚಾರಿತ್ರ್ಯ ಎಂದು ಅರ್ಥ. ಅಂಥ ವೃತ್ತದಿಂದ ಪಾತಿವ್ರತ್ಯಾದಿಗಳಿಂದ ಸಂಪನ್ನರಾದವರು ಕೂಡಾ ವೃತ್ತರೆನಿಸುತ್ತಾರೆ. ಅವರು ಪೀನರಾಗುವಂತೆ, ಸೌಭಾಗ್ಯ-ಸೌಮಾಂಗಲ್ಯ ಮುಂತಾದ ಸದ್ಗುಣಗಳಿಂದ ಪುಷ್ಟರಾಗುವಂತೆ ವಾಯುದೇವರು ಮಾಡುತ್ತಾರೆ. ಆದ್ದರಿಂದ ಪೀನವೃತ್ತರು ವಾಯುದೇವರು.

ಕಥಾಸರಿತ್ಸಾಗರದ ''ಆಪದ್ಯಪಿ ಸತೀವೃತ್ತಂ ಕಿಂ ಮುಂಚಂತಿ ಕುಲಸ್ತ್ರಿಯಃ'' ಎಂಬ ಈ ಶ್ಲೋಕದಲ್ಲಿ ಪಾತಿವ್ರತ್ಯ ಎಂಬ ಅರ್ಥದಲ್ಲಿ ವೃತ್ತ ಶಬ್ದವನ್ನು ಪ್ರಯೋಗಿಸಿದ್ದಾರೆ. ಈ ಶ್ಲೋಕದ ಅರ್ಥ ಇಷ್ಟು. ಕುಲಸ್ತ್ರೀಯರು ಆಪತ್ತು ಬಂದಾಗ ಪ್ರಾಣ ಬಿಟ್ಟಾರು. ಆದರೆ ತಮ್ಮ ಪಾತಿವ್ರತ್ಯವನ್ನು ಮಾತ್ರ ಬಿಡುವುದಿಲ್ಲ.

६) वृत्ता मृताः महाबाहवः दुष्टराजानो यस्मात् वृत्तमहाबाहुः, पीनश्चासौ वृत्तबाहुश्च, तम् । वृत्तो मृत इत्यर्थे प्रयोगः, ''वृत्तं युद्धे

शूरमाश्लिष्ट काचित्'' माघे १८-६० ।। वृत्तोऽतीते दृढे ख्याते वर्तुलेऽपि वृते मृते ।। इति विश्वः ।।

ಅಥವಾ ಪೀನ ಎಂದರೆ ಹಿಂದೆ ತಿಳಿದಂತೆ ಪುಷ್ಟರಾದವರು ಎಂದೇ ಅರ್ಥ. ವೃತ್ತಾಃ ಎಂದರೆ ಮೃತರಾದವರು ಎಂದು ಅರ್ಥ. **ಮಹಾಬಾಹವಃ** ದುಷ್ಟರಾದ, ಮಹಾಬಲದಿಂದ ಸಂಪನ್ನರಾದ ಜರಾಸಂಧಾದಿಗಳು **ವೃತ್ತಾಃ** ಯಾರ ಸಾಮರ್ಥ್ಯದಿಂದ ಮೃತರಾಗಿರುವರೋ ಅಂಥ ವಾಯುದೇವರು ಪೀನವೃತ್ತಮಹಾಬಾಹುಗಳು ಎಂಬುದಾಗಿ ತಿಳಿಯಬೇಕು.

**೭) पीनं परिपुष्टं उपनिषदादिप्रमाणोपोद्बलितं वृत्तं इतिहासः यस्य विषये स पीनवृत्तः स चासौ महाबाहुश्चेति वा तादृशः महाबाहुः विष्णुः अस्ति अनुग्रहकतया यस्येति वा तम् । महाबाहुशब्दस्य विष्णवर्थकत्वस्थितेः कोशे ।**

**ಪೀನಂ** ಪರಿಪುಷ್ಟವಾದ ಅಂದರೆ ಶ್ರುತಿ-ಸ್ಮೃತಿ-ಇತಿಹಾಸಗಳಿಂದ ಉಪೋದ್ಬಲಿತವಾದ **ವೃತ್ತಂ** ಇತಿಹಾಸವು ಯಾವ ಪರಮಾತ್ಮನನ್ನು ಪ್ರತಿಪಾದಿಸುತ್ತದೋ ಅಂಥ ಪರಮಾತ್ಮ **ಪೀನವೃತ್ತ**. ಆ ಪರಮಾತ್ಮನಿಗೆ **ಮಹಾಬಾಹು** ಎಂದು ಕೋಶಗಳು ಕರೆಯುತ್ತವೆ. ಹೀಗಾಗಿ **ಪೀನವೃತ್ತಮಹಾಬಾಹು** ಎಂದರೆ ಪರಮಾತ್ಮ ಎಂದು ಅರ್ಥ. ಪೀನವೃತ್ತಮಹಾಬಾಹುವಾದ ಪರಮಾತ್ಮನ ಪರಿಪೂರ್ಣವಾದ ಅನುಗ್ರಹವನ್ನು ಪಡೆದವರು ಮುಖ್ಯಪ್ರಾಣದೇವರು. ಆದ್ದರಿಂದ ಅವರು ಕೂಡಾ **ಪೀನವೃತ್ತಮಹಾಬಾಹು**ಗಳೆನಿಸುತ್ತಾರೆ.

ವಾಯುದೇವರ, ಹನುಮಂತದೇವರ, ಭೀಮಸೇನದೇವರ, ಮಧ್ವರ ಇತಿಹಾಸವು ಕೂಡಾ ಶ್ರುತಿ-ಸ್ಮೃತಿ-ಇತಿಹಾಸಗಳಿಂದ ಪರಿಪುಷ್ಟವಾಗಿದೆ. ವಾಯುದೇವರು ಮಹಾಬಾಹುಗಳಾಗಿದ್ದಾರೆ. ಆದ್ದರಿಂದ **ಪೀನವೃತ್ತ-ಮಹಾಬಾಹು** ಎಂದರೆ ವಾಯುದೇವರು ಎಂದೂ ಅರ್ಥೈಸಿಕೊಳ್ಳಬಹುದು. ''ಶ್ರುತಿಶತಮಿತಿಹಾಸಾದಿ ಚಾಕರ್ಣಯಾಮಃ'' ಎಂಬ ವಚನ ಈ ವಿಷಯದಲ್ಲಿ ಪ್ರಸಿದ್ಧವಾಗಿದೆ.

**८) पीनानि विष्णुभक्तिरसपुष्टानि वृत्तानि वृत्तवन्ति पद्यानि रामायणस्थानि उच्चार्यतया सन्ति यस्मिन् पीनवृत्तः स चासौ महाबाहुः रामनामभजनकाले भक्त्या करताडनप्रयोजकत्वरूपमहत्त्वयुक्तबाहुमांश्च तथा तम् ।**

**ಪೀನಾನಿ** ವಿಷ್ಣುಭಕ್ತಿ ಎಂಬ ರಸದಿಂದ ಪುಷ್ಟವಾದ **ವೃತ್ತಾನಿ** ಅನೇಕ ವೃತ್ತಗಳಿಂದ ಕೂಡಿದ ಪದ್ಯಗಳು, ಅಂಥ ಪದ್ಯಗಳಿಂದ ಯುಕ್ತವಾದ ಮೂಲರಾಮಾಯಣವೂ **ಪೀನವೃತ್ತ** ಎನಿಸುತ್ತದೆ. ಅಂಥ ಪೀನವೃತ್ತವಾದ ಮೂಲರಾಮಾಯಣವನ್ನು ನಿರಂತರ ಗಾನಮಾಡುವ ಮಹಾನುಭಾವರು ಹನುಮಂತದೇವರು. ಅವರು ಕೂಡಾ **ಪೀನವೃತ್ತ**ರೆನಿಸುತ್ತಾರೆ.

ಈ ಅರ್ಥವನ್ನು ಹೇಳುವ ಪೀನವೃತ್ತ ಶಬ್ದದ ಮುಂದೆ ಮಹಾಬಾಹು ಎಂಬ ಶಬ್ದವನ್ನು ಜೋಡಿಸಲು ಸುಂದರವಾದ ಕಾರಣವಿದೆ. ಅದೇನೆಂಬುದನ್ನು ಗಮನಿಸಿ.

ಹನುಮಂತದೇವರು ಬೃಹದ್ಗಾತ್ರದ ಮೂಲರಾಮಾಯಣವನ್ನು ಗಾನಮಾಡುತ್ತಾರೆ. ಗಾನಕ್ಕೆ ತಕ್ಕಂತೆ ಕರತಾಡನ ಮಾಡುತ್ತಾರೆ. ರಾಮನನ್ನು ಭಜಿಸುವ ಕಾಲದಲ್ಲಿ ಭಕ್ತಿಯಿಂದ ಕರತಾಡನ ಮಾಡಬೇಕು. ಆ ಕರತಾಡನಕ್ಕೆ ಅನುಕೂಲವಾಗುವಂಥ ಸಶಕ್ತವಾದ ಮಹಾಬಾಹುಗಳು ಹನುಮಂತದೇವರಿಗೆ ಇವೆ. ಹೀಗಾಗಿ ಪೀನವೃತ್ತ ಪದದ ಮುಂದೆ ಮಹಾಬಾಹು ಎಂಬ ಶಬ್ದವನ್ನು ಜೋಡಿಸಿದ್ದಾರೆ ವ್ಯಾಸರಾಜರು. ಅಂತೂ **ಪೀನವೃತ್ತಮಹಾಬಾಹು**ಗಳು ಹನುಮಂತದೇವರು.

**९) पीनं सीतासन्दर्शनाङ्गुलीयकदानतच्चूडामण्याहरणादिविषयकतया पुष्टं वृत्तं वार्ता येन (श्राविता) सः पीनवृत्तः, स चासौ महाबाहुश्च तम् । पर्वताकारतनुत्वाद्गमनवेलायाम् ।**

ಅಥವಾ **ಪೀನಂ** ಸೀತೆಯ ಸಂದರ್ಶನ, ಅಂಗುಲೀಯಕದಾನ ಮತ್ತು ಅವಳು ಕೊಟ್ಟ ಚೂಡಾಮಣಿಯನ್ನು ತರುವುದು ಇತ್ಯಾದಿವಿಷಯಗಳಿಂದ ಪೀನವಾದ ಪುಷ್ಟವಾದ **ವೃತ್ತಂ** ವಾರ್ತೆಯುಳ್ಳವರು ಹನುಮಂತದೇವರು **ಪೀನವೃತ್ತ**ರು.

ಎಲ್ಲರಿಗೂ ಅನುಕೂಲವಾದ ವಾರ್ತೆಯನ್ನು ಮುಟ್ಟಿಸಿದವರು ಎಂದು ತಾತ್ಪರ್ಯ. ಸೀತೆಯ ವಾರ್ತೆಯನ್ನು ತರಲು ಹೊರಡುವಾಗ ಮಹಾರೂಪವನ್ನು ಸ್ವೀಕರಿಸಿ ಮಹಾಬಾಹುಗಳಾದರು. ಆದ್ದರಿಂದ **ಪೀನವೃತ್ತಮಹಾಬಾಹು**ಗಳು ಹನುಮಂತದೇವರು. ''ಅವರ್ಧತಾಶು ಪ್ರವಿಚಿಂತ್ಯ ರಾಮಮ್'' (೬.೫೯) ಎಂಬ ತಾತ್ಪರ್ಯನಿರ್ಣಯದ ವಚನ ಈ ವಿಷಯವನ್ನು ಪ್ರತಿಪಾದಿಸುತ್ತದೆ.

**१०) पीनः परिपुष्टः ब्रह्माण्डाधारशेषाधारभूतश्चासौ वृत्तः कूर्मरूपवान् च, स चासौ महाबाहुः । इच्छया सङ्कोचविकास-योग्यत्वरूपमहत्त्वयुक्तबाहुमान् । वृत्तः कूर्मः इति आभिधानिकाः ।**

ಕೂರ್ಮ ದುಂಡಾಗಿ ಇರುತ್ತದೆ. ಆದ್ದರಿಂದ ಕೂರ್ಮವನ್ನು ವೃತ್ತ ಎಂದು ಕರೆಯುತ್ತಾರೆ.

ಶೇಷದೇವರು ಈ ಸಮಗ್ರ ಜಗತ್ತನ್ನು ಸಾಸಿವೆಯ ಕಾಳಿನಂತೆ ತಮ್ಮ ಹೆಡೆಯಲ್ಲಿ ಧರಿಸಿದ್ದಾರೆ. ಅಂಥ ಶೇಷದೇವರನ್ನು ಕೂರ್ಮರೂಪದ ವಾಯುದೇವರು ತಮ್ಮ ಬಾಲದ ಮೇಲೆ ಧರಿಸಿದ್ದಾರೆ. ಇಷ್ಟು ಪೀನವಾದ, ಪರಿಪುಷ್ಟವಾದ, **ವೃತ್ತ**=ಕೂರ್ಮ, ವಾಯುದೇವರು. ಆದ್ದರಿಂದ ಅವರು **ಪೀನವೃತ್ತ**ರು.

ಈ ಪ್ರಸಂಗದಲ್ಲಿ ಮಹಾಬಾಹು ಶಬ್ದದ ಸ್ವಾರಸ್ಯವನ್ನು ಹೀಗೆ ತಿಳಿಯಬೇಕು. ಕೂರ್ಮ ತನ್ನ ಬಾಹುಗಳನ್ನು ಯಾವಾಗ ಬೇಕು ಆವಾಗ ಒಳಗೆ ತೆಗೆದುಕೊಳ್ಳುತ್ತದೆ. ತನಗೆ ಬೇಕಾದಾಗ ಹೊರಗೆ ಹಾಕುತ್ತದೆ. ಹೀಗೆ ನಮಗಾರಿಗೂ ಮಾಡಲು ಬರುವುದಿಲ್ಲ. ಇದೇ ಆ ಕೂರ್ಮದಲ್ಲಿಯ ವೈಶಿಷ್ಟ್ಯ. ಇದೇ ವಾಯುಕೂರ್ಮದ ಮಹತ್ತ್ವ. ಆದ್ದರಿಂದ ವಾಯುದೇವರನ್ನು ಮಹಾಬಾಹು ಎಂದು ಕರೆದಿದ್ದಾರೆ.

**११) पीयते देवैरिति पिः चन्द्रः पिबतेर्डिः, इनः सूर्यः, पिश्च इनश्च पीनौ चन्द्रसूर्यौ, वृत्तं परिवेषः अस्ति अनयोरिति वृत्तौ । पीनौ वृत्तौ परिवेषवन्तौ यस्मादिति पीनवृत्तः । हनूमत्प्रभां दृष्ट्वा विरिञ्चिः विधोः भानोश्च परिवेषं वैयर्थ्यसूचकं विदधाविति भावः । स चासौ महाबाहुश्च ।**

ಚಂದ್ರನಲ್ಲಿಯ ಕಲೆಗಳನ್ನು ದೇವತೆಗಳು ಪಾನ ಮಾಡುತ್ತಾರೆ ಆದ್ದರಿಂದ **ಪಿ** ಎಂದರೆ ಚಂದ್ರ ಎಂದು ಅರ್ಥ. **ಇನ** ಎಂದರೆ ಸೂರ್ಯ. ಒಟ್ಟಾರೆ ಪೀನ ಎಂದರೆ ಚಂದ್ರ-ಸೂರ್ಯರು. **ವೃತ್ತ** ಎಂದರೆ ಪರಿವೇಷ. ಚಂದ್ರ-ಸೂರ್ಯರ ಸುತ್ತಲೂ ಇರುವ ವೃತ್ತಾಕಾರದ ಗೆರೆಯೇ ಪರಿವೇಷ. ಈ ಪರಿವೇಷವನ್ನು ಬ್ರಹ್ಮದೇವರು ಹಾಕಿದ್ದಾರೆ.

ನೈಷಧಕಾವ್ಯದಲ್ಲಿ ಶ್ರೀಹರ್ಷಕವಿ ಹೀಗೆ ಕಲ್ಪಿಸಿದ್ದಾನೆ. ಆ ಮಾತುಗಳನ್ನು ಗಮನಿಸಿ.

**ತದೋಜಸಸ್ತದ್ಯಶಸಸ್ಥಿತಾವಿಮೌ**
**ವೃಥೇತಿ ಚಿತ್ತೇ ಕುರುತೇ ಯದಾ ಯದಾ ।**
**ತನೋತಿ ಭಾನೋಃ ಪರಿವೇಷಕೈತವಾ-**
**ತ್ತದಾ ವಿಧಿಃ ಕುಂಡಲನಾಂ ವಿಧೋರಪಿ ॥೧.೧೪॥**

ನಲಮಹಾರಾಜನ ತೇಜಸ್ಸು ಇರುವಾಗ, ಧವಲವಾದ ನಲನ ಕೀರ್ತಿ ಇರುವಾಗ ಈ ಸೂರ್ಯ-ಚಂದ್ರರ ಬೆಳಕು-ಬೆಳದಿಂಗಳು ವ್ಯರ್ಥ ಎಂದು ಬ್ರಹ್ಮದೇವರಿಗೆ ಅನ್ನಿಸುತ್ತದೆ. ಇವುಗಳು ವ್ಯರ್ಥ ಎಂದು ಸೂಚಿಸಲು ಸೂರ್ಯ-ಚಂದ್ರರ ಸುತ್ತಲೂ ವೃತ್ತಾಕಾರದ ಗೆರೆಯನ್ನು ಹಾಕುತ್ತಾನಂತೆ. ಸ್ವಾಭಾವಿಕವಾಗಿಯೇ ಸೂರ್ಯ-ಚಂದ್ರರ ಸುತ್ತಲೂ ಇರುವ ಆ ಪರಿವೇಷಕ್ಕೆ ಕಾರಣವನ್ನು ಕಲ್ಪಿಸುತ್ತಾನೆ ಕವಿ.

ನಲನ ವಿಷಯದಲ್ಲಿ ಇದು ಕಲ್ಪನೆಯಾದರೆ, ಜೀವೋತ್ತಮರಾದ, ಸಕಲದೇವೋತ್ತಮರಾದ ವಾಯುದೇವರ ವಿಷಯದಲ್ಲಿ ಇದು ವಾಸ್ತವ. ಈ ಮಾತು ನಿಜವಾಗಿಯೂ ವಾಯುದೇವರಿಗೆ ಸರಿಹೊಗುತ್ತದೆ. ಆ ಪರಿವೇಷ ಹಾಕಿದ್ದು ನಲನಿಗಾಗಿ ಅಲ್ಲ. ವಾಯುದೇವರಿಗಾಗಿಯೇ. ಹೀಗೆಯೇ ತಿಳಿಯಬೇಕು. ಹೀಗೆ ವಾಯುದೇವರಿಗೋಸ್ಕರ ಸೂರ್ಯ-ಚಂದ್ರರ ಸುತ್ತಲೂ ದೇವರು ವೃತ್ತ ಹಾಕಿದ. ಆದ್ದರಿಂದ ಪೀನವೃತ್ತರು ವಾಯುದೇವರು.

**१२) पिबति स्वाख्यरसमिति पिः, पाति रक्षतीति वा पिः, पातेः पिबतेर्वा डिः । कपिलनामा हरिः । ''सुखादनन्तात्पालनात् लापनाच्चे''ति (१०.२६) गीताभाष्योक्तेः । नामैकदेशग्रहणे**

**नामग्रहणात् कपिलनामैकदेश ''पि'' ग्रहणे कपिलनामग्रहणं कार्यम् । तथाच च पिः सर्वकर्मपालकः, सर्वकर्मफलभोजयिता कपिलः, इनः स्वामी, यस्य सः पीनः हनूमान्, हनूमन्तं कपिं भृत्यत्वेन लाति स्वीकरोतीति कपिलः हरिः, पिः सः कपिलः इनः अस्येति पीनः हनूमानिति सम्बन्धः अन्योन्यं सम्यगस्ति । स चासौ वृत्तश्च सदाचारवांश्चासौ महाबाहुश्च तम् ।**

ಸ್ವಾಖ್ಯರಸವನ್ನು ಪಾನ ಮಾಡುತ್ತಾನೆ ಆದ್ದರಿಂದ **ಪಿ** ಪರಮಾತ್ಮ. ರಕ್ಷಿಸುತ್ತಾನೆ ಆದ್ದರಿಂದಲೂ **ಪಿ** ಕಪಿಲನಾಮಕನಾದ ಪರಮಾತ್ಮ. ''ನಾಮ್ನೈಕದೇಶಗ್ರಹಣೇ ನಾಮಗ್ರಹಣಮ್'' ಎಂಬ ನಿಯಮ ಇದ್ದುದರಿಂದ **ಪಿ** ಎಂದರೆ ಕಪಿಲ ಎಂಬ ಅರ್ಥವನ್ನು ತಿಳಿಯಬೇಕು.

ಸತ್ಯಭಾಮೆಯನ್ನು ಸತ್ಯಾ ಎಂದೂ ವ್ಯವಹರಿಸಿದ್ದಾರೆ. ಭಾಮಾ ಎಂತಲೂ ವ್ಯವಹಾರವಿದೆ. ಮೊದಲಪದ, ಮಧ್ಯಪದ, ಅಂತ್ಯಪದ ಯಾವುದಾದರೂ ತೆಗೆದುಕೊಳ್ಳಬಹುದು. ಹೀಗಾಗಿ ಕಪಿಲ ಎಂಬ ಹೆಸರಿನಲ್ಲಿಯ ಮಧ್ಯಪದವಾದ ಪಿ ಎಂಬ ಪದದಿಂದಲೂ ಕಪಿಲನನ್ನು ವ್ಯವಹರಿಸಬಹುದು.

ಅನಂತಸುಖರೂಪನಾದದ್ದರಿಂದ ಭಗವಂತ **ಕ**. ಪಾತಾ ರಕ್ಷಕ ಆಗಿದ್ದಾನೆ ಆದ್ದರಿಂದ **ಪಿ**. ಲಯ ಮಾಡುತ್ತಾನೆ ಆದ್ದರಿಂದ **ಲ**. ಹೀಗೆ ಭಗವಂತ ಕಪಿಲಶಬ್ದವಾಚ್ಯನಾಗಿದ್ದಾನೆ ಎಂದು ಗೀತಾಭಾಷ್ಯವು ತಿಳಿಸುತ್ತದೆ.

ಇಂಥ **ಪಿ** ಕಪಿಲನಾಮಕ ಪರಮಾತ್ಮನೇ **ಇನ** ಹನುಮಂತದೇವರಿಗೆ ಸ್ವಾಮಿಯಾಗಿದ್ದಾನೆ. ಆದ್ದರಿಂದ ಹನುಮಂತದೇವರು **ಪೀನ** ಎನಿಸುತ್ತಾರೆ.

ಕಪಿಲನಿಗೂ ಹನುಮಂತದೇವರಿಗೂ ಸಂಬಂಧವೇನು? ಗಮನಿಸಿ. ಕರ್ಮಪಾಚಕ ಕಪಿಲ. ಕರ್ಮಫಲಪ್ರದಾತಾ ಕಪಿಲ. ಕರ್ಮಪ್ರೇರಕರು ವಾಯುದೇವರು. ಹೀಗಾಗಿ ಕಪಿಲನಿಗೂ ವಾಯುದೇವರಿಗೂ ನಿಕಟವಾದ ಸಂಬಂಧವಿದೆ.

ಕಪಿಲ ಎಂಬ ಶಬ್ದಕ್ಕೆ ಹೀಗೂ ಅರ್ಥವನ್ನು ತಿಳಿಯಬಹುದು. ಕಪಿಯನ್ನು ಲಾತಿ ಭೃತ್ಯನೆಂದು ಸ್ವೀಕರಿಸುತ್ತಾನೆ. ಆದ್ದರಿಂದ ಪರಮಾತ್ಮ ಕಪಿಲ. ಇಂಥ **ಪಿ**

ಕಪಿಲನು **ಇನ** ವಾಯುದೇವರಿಗೆ ಸ್ವಾಮಿಯಾಗಿದ್ದಾನೆ. ಆದ್ದರಿಂದ **ಪೀನ** ವಾಯುದೇವರು. **ವೃತ್ತ** ಸಚ್ಚಾರಿತ್ರ್ಯದಿಂದ ಸಂಪನ್ನರಾಗಿದ್ದಾರೆ, ಮತ್ತು ಮಹಾಬಾಹುಗಳಾಗಿದ್ದಾರೆ ಆದ್ದರಿಂದ **ಪೀನವೃತ್ತಮಹಾಬಾಹು**ಗಳು ಹನುಮಂತದೇವರು.

**१३) पीनाद् भगवतो वृत्तं चारित्र्यं यस्य स चासौ महाबाहुश्च ।**

ಪರಮಾತ್ಮ ಗುಣಗಳಿಂದ ಪೀನನಾಗಿದ್ದಾನೆ. ಪರಿಪುಷ್ಟನಾಗಿದ್ದಾನೆ. ಅನಂತಗುಣಗಳಿಂದ ಪರಿಪೂರ್ಣನಾಗಿದ್ದಾನೆ. ಆದ್ದರಿಂದ ಪೀನ ಶಬ್ದದಿಂದ ವಾಚ್ಯನಾಗಿದ್ದಾನೆ. ಪೀನನಾದ ಪರಮಾತ್ಮನಿಂದ **ವೃತ್ತ**ವನ್ನು ಸಚ್ಚಾರಿತ್ರ್ಯವನ್ನು ಹನುಮಂತದೇವರು ಪಡೆದಿದ್ದಾರೆ. ಮತ್ತು ಪೀನನಾದ ಪರಮಾತ್ಮನಿಂದಲೇ ಮಹಾಬಾಹುಗಳಾಗಿದ್ದಾರೆ ಹನುಮಂತದೇವರು. ಆದ್ದರಿಂದ **ಪೀನವೃತ್ತಮಹಾಬಾಹು**ಗಳು ಹನುಮಂತದೇವರು ಎಂಬುದಾಗಿ ತಿಳಿಯಬೇಕು.

**१४) वृत्तं सत्वं च महाबाहू च वृत्तमहाबाहवः । पीनाद् भगवतो वृत्तमहाबाहव यस्य इति वा ।**

ಅಥವಾ **ವೃತ್ತ** ಎಂದರೆ ಸತ್ತ್ವ ಎಂದು ಅರ್ಥ. **ಪೀನಾತ್** ಪೀನನಾದ ಪರಮಾತ್ಮನ ಅನುಗ್ರಹದಿಂದ **ಸತ್ತ್ವಂ ಮಹಾಬಾಹೂ ಯಸ್ಯ ಸಃ** ಸತ್ತ್ವವನ್ನು ಮತ್ತು ಮಹಾಬಾಹುಗಳನ್ನು ಪಡೆದಿದ್ದಾರೆ. ಅದ್ದರಿಂದ ವಾಯುದೇವರು **ಪೀನವೃತ್ತಮಹಾಬಾಹು**ಗಳು.

**१५) पिबन्ति इति पयः कर्मफलभोक्तारो जीवाः तेषां इनाः स्वामिनः देवाः पीनाः, तेषामेव मुख्यफलभोक्तृत्वात् । वृत्ताश्च चारित्र्यवन्तः सत्त्ववन्तो वा महाबाहवश्च यस्मात् सः तम् ।**

**ಪಿ** ಕರ್ಮಫಲಭೋಗ ಮಾಡುವ ಜೀವರು. ಅವರಿಗೆ **ಇನ** ಸ್ವಾಮಿಗಳಾದ ದೇವತೆಗಳು ಪೀನರು. ಆ ಎಲ್ಲ ದೇವತೆಗಳು ವೃತ್ತವನ್ನು=ಚಾರಿತ್ರ್ಯವನ್ನು ಮಹಾಬಾಹುಗಳನ್ನು ವಾಯುದೇವರಿಂದ ಪಡೆದಿದ್ದಾರೆ. ಆದ್ದರಿಂದ ವಾಯುದೇವರು ಪೀನವೃತ್ತಮಹಾಬಾಹುಗಳು.

१६) पीनाः देवाः वृत्तमहाबाहवः मृतशूरशत्रवः यस्मात् तम् ।

**ಪೀನಾಃ**=ದೇವತೆಗಳು, ವೃತ್ತಮಹಾಬಾಹವಃ **ವೃತ್ತಾಃ** ವ್ಮೃತರಾದ, **ಮಹಾಬಾಹವಃ** ಶೂರರಾದ ಶತ್ರುಗಳುಳ್ಳವರು. ಯಸ್ಮಾತ್ ಯಾವ ವಾಯುದೇವರ ಅನುಗ್ರಹದಿಂದ ಸಃ ಅಂಥ ವಾಯುದೇವರು ಪೀನವೃತ್ತಮಹಾಬಾಹುಗಳು.

ದೇವತೆಗಳು ವಾಯುದೇವರ ಅನುಗ್ರಹದಿಂದಲೇ ತಮ್ಮ ಶತ್ರುಗಳನ್ನು ಸಂಹರಿಸಿದ್ದಾರೆ. ಆದ್ದರಿಂದ ಪೀನವೃತ್ತಮಹಾಬಾಹುಗಳು ವಾಯುದೇವರು ಎಂದು ತಿಳಿಯಬೇಕು.

१७) पीनवृत्तश्चासौ महाबाहुः महत्तत्वात्मकबाहुश्च तम् ।

**ಪೀನ** ಪರಿಪುಷ್ಟವಾದ **ವೃತ್ತ** ದುಂಡಾದ **ಮಹಾಬಾಹು** ಮಹತ್ತತ್ತ್ವಾತ್ಮಕವಾದ ಬಾಹುಗಳುಳ್ಳವರು. ಆದ್ದರಿಂದ ವಾಯುದೇವರು ಪೀನವೃತ್ತಮಹಾಬಾಹುಗಳು. ವಾಯುದೇವರ ಇಡಿಯ ದೇಹವೇ ಮಹತ್ತತ್ತ್ವಾತ್ಮಕವಾಗಿದೆ. ಹೀಗಾಗಿ ವಾಯುದೇವರ ಬಾಹುಗಳು ಕೂಡಾ ಮಹತ್ತತ್ತ್ವಾತ್ಮಕ ಎಂದು ತಿಳಿಯುವುದು ಸಮಂಜಸವೇ ಆಗಿದೆ.

१८) पीनवृत्तश्चासौ महाबाहुः सङ्ख्याकृतमहत्त्ववद्बाहुः च । तम् त्रिकोटिरूपस्य षट्कोटिबाहुमत्वात् । अनन्तरूपस्य अनन्त-बाहुमत्वाच्च ।

ಹಿಂದೆ ತಿಳಿದಂತೆ ಪೀನ ಎಂದರೆ ಪರಿಪುಷ್ಟರಾದವರು, ವೃತ್ತ ಎಂದರೆ ಸಚ್ಚಾರಿತ್ರ್ಯದಿಂದ ಯುಕ್ತರಾದವರು ಎಂದು ಅರ್ಥ.

ಮಹಾಬಾಹು ಎಂಬುದಕ್ಕೆ ಮತ್ತೊಂದು ರೀತಿಯಾಗಿ ಅರ್ಥವನ್ನು ತಿಳಿಯಬಹುದು. ಮಹಾಬಾಹುಗಳೆಂದರೆ ಅನೇಕಬಾಹುಗಳು ಉಳ್ಳವರು ಎಂದು ಅರ್ಥ. ಅದನ್ನು ಹೀಗೆ ತಿಳಿಯಬಹುದು. ವಾಯುದೇವರಿಗೆ ಮೂರುಕೋಟಿ ರೂಪಗಳಿವೆ. ಒಂದೊಂದು ರೂಪಕ್ಕೆ ಎರಡೆರಡು ಬಾಹುಗಳು ಎಂದು ಇಟ್ಟುಕೊಂಡರೂ ಆರುಕೋಟಿ ಬಾಹುಗಳಾಗುತ್ತವೆ. ಈ ಮೂರುಕೋಟಿ ರೂಪಗಳು ಪ್ರತ್ಯೇಕವಾದವುಗಳು. ಇವಲ್ಲದೇ ವಾಯುದೇವರ ಅಂತರ್ಯಾಮಿ

ರೂಪಗಳಿವೆ. ಆ ಎಲ್ಲ ರೂಪಗಳನ್ನು ಸ್ವೀಕರಿಸಿದರಂತೂ ಅನಂತಬಾಹುಗಳಾಗುತ್ತವೆ. ಮಹತ್ತಾದ, ಸಂಖ್ಯೆಯಿಂದಾಗಿ ಮಹತ್ತಾದ ಅಂದರೆ, ಅನಂತವಾದ ಬಾಹುಗಳು ವಾಯುದೇವರಿಗೆ ಇರುವುದರಿಂದ ಮಹಾಬಾಹು ಎಂದು ಶ್ರೀವ್ಯಾಸರಾಜರು ಸ್ತುತಿಸಿದ್ದಾರೆ.

### ಸರ್ವಶತ್ರುನಿವಾರಣಮ್

**१) सर्वे आन्तरा बाह्याश्च ये शत्रवः तेषां निवारणं संहारकम् । संहारो यस्मादिति वा रावणादयः ।**

ಆಂತರ ಮತ್ತು ಬಾಹ್ಯಶತ್ರುಗಳನ್ನು ನಿವಾರಿಸುತ್ತಾರೆ. ಆದ್ದರಿಂದ ವಾಯುದೇವರು ಸರ್ವಶತ್ರುನಿವಾರಣ ಎನಿಸಿದ್ದಾರೆ.

**२) सर्वस्य नारायणस्य ये शत्रवः तन्निवारणम् । ''सर्वः शर्वः शिवः स्थाणुः'' इति विष्णुनामसु पाठात् ।**

**ಸರ್ವ** ಸರ್ವನಾಮಕನಾದ ನಾರಾಯಣನ **ಶತ್ರು** ಶತ್ರುಗಳಾದ ರಾವಣಾದಿಗಳನ್ನು **ನಿವಾರಣಂ** ನಿವಾರಿಸುತ್ತಾರೆ. ಆದ್ದರಿಂದ ಹನುಮಂತದೇವರು ಸರ್ವಶತ್ರುನಿವಾರಣರಾಗಿದ್ದಾರೆ.

**३) ''सर्वं समाप्नोषि ततोऽसि सर्वः'' (गीता.११.४०) इत्युक्तेः । सर्वस्य (भावप्राधान्यात्) सर्वत्वस्य पूर्णत्वस्य शत्रवः तन्निवारणम् ।**

ಸರ್ವ ಎಂದರೆ ಸರ್ವತ್ವ ಪರಿಪೂರ್ಣತ್ವ ಎಂದು ಅರ್ಥ. ಸರ್ವಶತ್ರು ಎಂದರೆ ಸರ್ವತ್ವವನ್ನು ಪರಿಪೂರ್ಣತ್ವವನ್ನು ವಿರೋಧಿಸುವವರು ಎಂದು ಅರ್ಥ. ಇವರನ್ನು ತಮ್ಮ ವಾದಕೌಶಲದಿಂದ ನಿವಾರಿಸುತ್ತಾರೆ. ಆದ್ದರಿಂದ ವಾಯುದೇವರು ಸರ್ವಶತ್ರುನಿವಾರಣರೆನಿಸಿದ್ದಾರೆ.

**४) ''स्रष्टा पाता च संहर्ता नियन्ता च प्रकाशिता ।**

**यतः सर्वस्य तेनाहं सर्वोऽस्मीत्यृषिभिः स्मृतः ।। (७.५) इति गीताभाष्योक्तेः**

सर्वस्य, भावप्राधान्यं, सर्वत्वस्य सर्वसृष्टिकर्तृत्वस्य, सर्वस्थितिकर्तृत्वस्य सर्वसंहारकर्तृत्वस्य, सर्वज्ञानकर्तृत्वस्य शत्रवः विरोधिनः निष्क्रियत्ववादिनः स्थितिकर्तृत्वमात्रवादिनः यत्किञ्चिन्महाकल्पीयपदसम्बन्धिसृष्टिकर्तृत्वादिवादिनो वा ये तन्निवारणम् ।

ಹಲವು ವಾದಿಗಳು ಭಗವಂತನಿಗೆ ಸರ್ವತ್ವವನ್ನು ಅರ್ಥಾತ್ ಸರ್ವಸೃಷ್ಟಿಕರ್ತೃತ್ವವನ್ನು ಒಪ್ಪುವುದಿಲ್ಲ. ಕೆಲವರು ಭಗವಂತನಿಗೆ ಸರ್ವತ್ವವನ್ನು ಅಂದರೆ ಸರ್ವಸ್ಥಿತಿಕರ್ತೃತ್ವವನ್ನು ಅಂಗೀಕರಿಸುವುದಿಲ್ಲ. ಮತ್ತೆ ಕೆಲವರು ಸರ್ವತ್ವವನ್ನು ಅಂದರೆ ಸರ್ವಸಂಹಾರಕರ್ತೃತ್ವವನ್ನು ಒಪ್ಪುವುದಿಲ್ಲ. ದೇವರು ನಿಷ್ಕ್ರಿಯ ಎಂದು ಹೇಳುವವರು ಸರ್ವತ್ವವನ್ನು ಅಂದರೆ ಸರ್ವಕರ್ತೃತ್ವವನ್ನು ಒಪ್ಪುವುದಿಲ್ಲ. ಇವರೆಲ್ಲರೂ ಸರ್ವತ್ವವಿರೋಧಿಗಳು. ಆದ್ದರಿಂದ ಸರ್ವಶತ್ರುಗಳು. ಈ ಎಲ್ಲ ವಾದಿಗಳನ್ನು ವಾಯುದೇವರು ನಿವಾರಿಸುತ್ತಾರೆ. ಸರ್ವತ್ವದ ಸರ್ವಸೃಷ್ಟಿಕರ್ತೃತ್ವದ, ಸರ್ವಸ್ಥಿತಿಕರ್ತೃತ್ವದ, ಸರ್ವಸಂಹಾರಕರ್ತೃತ್ವದ, ಸರ್ವಕರ್ತೃತ್ವದ ಸಿದ್ಧಾಂತವನ್ನು ಸ್ಥಾಪಿಸಿದ್ದಾರೆ. ಆದ್ದರಿಂದ ವಾಯುದೇವರು ಸರ್ವಶತ್ರುನಿವಾರಣರೆನಿಸಿದ್ದಾರೆ.

५) सर्वस्य जगतः शत्रवः तन्निवारणम् ।

**ಸರ್ವಸ್ಯ** ಸಮಸ್ತಪ್ರಪಂಚಕ್ಕೆ **ಶತ್ರವಃ** ದ್ರೋಹವನ್ನು ಬಗೆಯುವವರು ಸರ್ವಶತ್ರುಗಳಾಗುತ್ತಾರೆ, ಅವರನ್ನು ವಾಯುದೇವರು ನಿವಾರಣ ಮಾಡಿದ್ದಾರೆ. ಆದ್ದರಿಂದ ಸರ್ವಶತ್ರುನಿವಾರಣರು ವಾಯುದೇವರು.

### ನಾನಾರತ್ನಸಮಾಯುಕ್ತಕುಂಡಲಾದಿವಿರಾಜಿತಮ್

१) नाना नानावर्णयुक्तानि, नानागुणयुक्तानि च तानि रत्नानि मणिमाणिक्यप्रवालवैडूर्यादीनि च नानारत्नानि, तैः सम्यग् दार्ढ्येन न तु शैथिल्येन, सौन्दर्यवर्धकत्वेन, मनोरञ्जकत्वेन च, न तु यथाकथञ्चित् आसमन्तात् न तु पुरोभागमात्रे युक्तानि नानारत्न-

समायुक्तानि । कुण्डलः आदिः येषां तानि कुण्डलादीनि कुण्डलमुकुट-काञ्च्यङ्गदादिभूषणानि तैः वि विशेषेण राजितम् दीप्तम्, शोभितं वा ।

ಪ್ರತಿಯೊಂದು ರತ್ನಕ್ಕೂ ವಿಶೇಷವಾದ ಗುಣಗಳಿರುತ್ತವೆ. ಹಲವು ರತ್ನಗಳು ತಂಪು ಕೊಡುತ್ತವೆ. ಹಲವು ರತ್ನಗಳು ಹಸಿವು-ನೀರಡಿಕೆಯನ್ನು ಪರಿಹರಿಸುತ್ತವೆ. ಕೆಲವು ರತ್ನಗಳು ಬೆಳಕು ಕೊಡುತ್ತವೆ. ಮತ್ತು ಚಿತ್ರ-ವಿಚಿತ್ರವಾದ ಬಣ್ಣಗಳಲ್ಲಿ ಆಯಾ ರತ್ನಗಳು ಇರುತ್ತವೆ. ಹೀಗೆ ವಿಚಿತ್ರವಾದ ಗುಣಗಳು ರತ್ನಗಳಿಗೆ ಇರುತ್ತವೆ. ಇಂಥ ಚಿತ್ರ-ವಿಚಿತ್ರವಾದ ರತ್ನಗಳಿಂದ ದೃಢವಾಗಿ ಬದ್ಧವಾದ ಕುಂಡಲಾದಿಗಳಿಂದ ವಿರಾಜಿತರಾಗಿದ್ದಾರೆ ವಾಯುದೇವರು. ವಾಯುದೇವರು ಧರಿಸಿದ ಎಲ್ಲ ಆಭರಣಗಳೂ ನಾನಾರತ್ನಗಳಿಂದ ಸಮಾಯುಕ್ತವಾಗಿವೆ.

२) तानि एव वा विराजितानि दीप्तानि येन यच्छरीरकान्त्या इति यावत्, तम् ।

ಅಥವಾ ಈ ಆಭರಣಗಳಿಂದ ವಾಯುದೇವರು ಶೋಭಿತರೆಂದಲ್ಲ. ವಾಯುದೇವರ ಮೈಕಾಂತಿಯಿಂದಲೇ ಈ ಮಾಣಿಕ್ಯಗಳು, ಈ ಎಲ್ಲ ಆಭರಣಗಳು ಪರಿಶೋಭಿತವಾಗಿವೆ ಎಂದು ತಿಳಿಯಬೇಕು.

३) यद्वा नानारत्नानि शिरोमणयः तैः समायुक्तः सम्यक् सहजतया न तु आगन्तुकतया आ समन्तात् सर्वफणावच्छेदेन न तु यत्किञ्चित्फणावच्छेदेन युक्तः नानारत्नसमायुक्तः ।

कुण्डलमस्यास्तीति कुण्डलवान् अहिः शेषदेवः, नानारत्नसमायुक्त-श्चासौ कुण्डलश्च नानारत्नसमायुक्तकुण्डलः । तथाहि भागवते तृतीये नवमाध्याये द्वात्रिंशत्तमे श्लोके,

मृणालगौरायतशेषभोगपर्यङ्क एकं पुरुषं शयानम् ।
फणासहस्रायुतमूर्धरत्नद्युभिर्हतध्वान्तयुगान्ततोये ।।

याद्- ''फणानां सहस्रे आ सम्यग् युतानि सम्बद्धानि । सहजानीति यावत् । यानि मूर्धरत्नानि तेषां द्युभिः प्रभाभिः हतं ध्वान्तं यस्य तत्तथा ।

अत्तीति अदिः संहर्ता रुद्रः, औणादिकः इः, बहुलग्रहणात् । विः पक्षिराड् गरुडः, स च स च अयं च, नानारत्नसमायुक्तकुण्डलादिवयः । तैः सेवकतया, स्तावकतया, परिवरतया परितः स्थितैः राजितं शोभितं दीप्तं वा ।

ಅಥವಾ **ನಾನಾರತ್ನಸಮಾಯುಕ್ತಕುಂಡಲ** ಎಂದರೆ ಶೇಷದೇವರು, **ಅದಿ** ರುದ್ರದೇವರು, **ವಿ** ಗರುಡದೇವರು **ರಾಜಿತಂ** ಈ ಎಲ್ಲ ದೇವತೆಗಳಿಂದ ಪರಿಶೋಭಿತರಾದವರು ವಾಯುದೇವರು. ಆದ್ದರಿಂದ ಅವರು ನಾನಾರತ್ನಸಮಾಯುಕ್ತಕುಂಡಲಾದಿವಿರಾಜಿತರು ಎಂಬುದಾಗಿ ತಿಳಿಯಬೇಕು. ಸ್ವಲ್ಪ ವಿವರವಾಗಿ ಅರ್ಥವನ್ನು ತಿಳಿಯೋಣ.

ನಾನಾವಿಧವಾದ, ಸಹಜವಾದ ರತ್ನಗಳು ಶೇಷದೇವರ ಹೆಡೆಯಲ್ಲಿ ವಿಭೂಷಿತವಾಗಿವೆ. ಆದ್ದರಿಂದ ಅವರು ನಾನಾರತ್ನಸಮಾಯುಕ್ತರು. ಶೇಷದೇವರ ಹೆಡೆಯಲ್ಲಿ ಸಹಜವಾದ ರತ್ನಗಳಿವೆ ಎಂದು ಯಾದವಾರ್ಯರು ಭಾಗವತದ ವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ. ಮತ್ತು ಕುಂಡಲದ ಆಕಾರದಲ್ಲಿದ್ದು ಪರಮಾತ್ಮನಿಗೆ ಶಯ್ಯೆಯಾಗಿರುತ್ತಾರೆ. ಆದ್ದರಿಂದ ಶೇಷದೇವರು ಕುಂಡಲರು. ಹೀಗೆ ನಾನಾರತ್ನಸಮಾಯುಕ್ತಕುಂಡಲರು ಶೇಷದೇವರು.

ಅದನ ಮಾಡುತ್ತಾರೆ ಸಂಹಾರ ಮಾಡುತ್ತಾರೆ ಆದ್ದರಿಂದ **ಅದಿ** ಎಂದರೆ ರುದ್ರದೇವರು. **ವಿ** ಗರುಡ. ಹೀಗೆ ಶೇಷ-ರುದ್ರ-ಗರುಡರಿಂದ ಸೇವಿತರಾಗಿರುವ ರಾಜಿತರಾಗಿರುವ ವಾಯುದೇವರು ನಾನಾರತ್ನಸಮಾಯುಕ್ತಕುಂಡಲಾದಿ ವಿರಾಜಿತರೆನಿಸಿದ್ದಾರೆ.

४) नानारत्नसमायुक्तत्वं कुण्डलादीनां त्रयाणामपि विशेषणं वा । सहजमण्यभावेऽपि भूषणादिद्वारा तत्समायुक्तत्वानपायात् । रुद्रस्य अश्वत्थामावतारे सहजमणिसद्भावाच्च । रुद्रस्य शेषत्वावस्थायां

**तत्सत्त्वाद्वा । सम्यग् अन्तर्यामिसमर्पितभूषणानीति बुद्ध्या आसमन्तात् यथायोग्यं सर्वाङ्गेषु युक्ताः इत्यर्थकरणे तु न कश्चित् क्षुद्रोपद्रवः ।**

ಅಥವಾ, ಶೇಷ-ರುದ್ರ-ಗರುಡರು ಅತ್ಯುಜ್ವಲವಾದ ರತ್ನಗಳನ್ನು ಧರಿಸಿದ್ದಾರೆ. ಅವರು ಧರಿಸಿದ ರತ್ನಗಳ ಪ್ರಕಾಶದಿಂದ ವಾಯುದೇವರು ದೀಪ್ತರಾಗಿದ್ದಾರೆ. ಎಂದೂ ತಿಳಿಯಬಹುದು.

ರುದ್ರದೇವರು ಅಶ್ವತ್ಥಾಮರಾದಾಗ ಸಹಜವಾದ ಮಣಿಯಿಂದ ಯುಕ್ತರಾಗಿದ್ದಾರೆ. ಅಥವಾ ರುದ್ರದೇವರೇ ಶೇಷದೇವರಾಗುತ್ತಾರೆ. ಶೇಷದೇವರು ರತ್ನಗಳನ್ನು ಧರಿಸಿದ್ದಂತೂ ಪ್ರಸಿದ್ಧವಾಗಿದೆ. ಈ ಅಭಿಪ್ರಾಯದಿಂದ ರುದ್ರದೇವರು ರತ್ನಗಳನ್ನು ಧರಿಸಿದ್ದಾರೆ. ಎಂದು ಪ್ರಕೃತ ಹೇಳಲಾಗಿದೆ.

**೯) ननु प्रथमार्थानुसारेण नानाभरणभूषितत्वं स्त्रीमनोरञ्जनाय इति न शङ्कनीयम् ब्रह्मचारित्वाद्धनुमदवतारस्येत्याह– नानेति ।।**

ಸ್ತ್ರೀಯರನ್ನು ಸಂತೋಷಪಡಿಸಲು ಪುರುಷರು ಆಭರಣಗಳನ್ನು ಧರಿಸುತ್ತಾರೆ. ವಾಯುದೇವರು ಭೀಮಸೇನದೇವರಾದಾಗ ೨೪ ಜನ ಸ್ತ್ರೀಯರನ್ನು ವಿವಾಹವಾಗಿದ್ದರು. ಹೀಗಾಗಿ ಭೀಮಸೇನದೇವರು ಆ ಎಲ್ಲ ಸ್ತ್ರೀಯರನ್ನು ಸಂತೋಷಪಡಿಸುವುದಕ್ಕಾಗಿ ಆಭರಣಗಳನ್ನು ತೊಟ್ಟಿದ್ದಾರೆ ಎಂದು ಹೇಳಲು ಅಡ್ಡಿಯಿಲ್ಲ. ಆದರೆ ಬ್ರಹ್ಮಚಾರಿಗಳಾದ ಹನುಮಂತದೇವರು, ಯತಿಗಳಾದ ಶ್ರೀಮದಾಚಾರ್ಯರು ಸ್ತ್ರೀಯರನ್ನು ಸಂತೋಷಪಡಿಸಲು ಆಭರಣಗಳನ್ನು ಧರಿಸಿದ್ದಾರೆ ಎಂದು ಹೇಳುವುದು ಸೂಕ್ತವಾಗುವುದಿಲ್ಲ ಎಂದು ಶಂಕಿಸಬಾರದು.

ಅಂತರ್ಯಾಮಿಯಾದ ಪರಮಾತ್ಮನಿಗೆ ಅಲಂಕಾರ ಎಂಬ ಭಾವನೆಯಿಂದ ಮಾತ್ರ ಇಷ್ಟೆಲ್ಲ ಆಭರಣಗಳನ್ನು ಹನುಮಂತದೇವರು ಧರಿಸಿದ್ದಾರೆ ಎಂದು ತಿಳಿಯಬೇಕು. ಭೀಮಸೇನದೇವರು ಕೂಡಾ ಕೇವಲ ಸ್ತ್ರೀಯರನ್ನು ಸಂತೋಷಪಡಿಸುವುದಕ್ಕಾಗಿ ಧರಿಸಿದ್ದಾರೆ ಎಂದು ತಿಳಿಯಬಾರದು. ಆ ಸ್ತ್ರೀಯರಲ್ಲಿ ಅಂತರ್ಯಾಮಿಯಾದ ಪರಮಾತ್ಮನ ಪ್ರೀತಿಗಾಗಿ ಈ ಎಲ್ಲ ಆಭರಣಗಳನ್ನು ಧರಿಸಿದ್ದಾರೆ ಎಂದು ತಿಳಿಯಬೇಕು.

अश्च नश्च अनौ, न विद्येते अनौ यस्मिन् तदानं, ''अमानोनाः प्रतिषेधे'' इति वचनादः प्रतिषेधपरः समस्ति । असमासोऽयम्, न नञ्समासः । आनं च तदरत्नं च आनारत्नं, अकारनकाररहितः अरत्नशब्दो नाम रतशब्दः । अकारः प्रथम एव गृह्यते । अरत्नशब्दः स्वरूपवाचकः । रतशब्देन तदर्थः सुरतं गृह्यते । तेन समायुक्तो न भवतीति नानारत्नसमायुक्तः । स चासौ कुण्डलादिविराजितश्च । तथाच कुण्डलादिकं केवलं भगवदाज्ञया भगवत्प्रीत्यर्थं अन्तर्याम्यलङ्करणार्थं चेति भावः ।

ಆನಾರತ್ನ ಎಂಬುದನ್ನು ಹೀಗೆ ಬಿಡಿಸಿಕೊಳ್ಳಬೇಕು. ಅ+ಅನ=ಆನ, ಆನ+ಅರತ್ನ=ಆನಾರತ್ನ. ಎಂದರೆ ಅಕಾರ-ನ್‌ಕಾರರಹಿತವಾದ ಅರತ್ನ ಎಂಬ ಶಬ್ದ. ಎಂದರೆ ರತ ಎಂಬ ಶಬ್ದ. ಅರತ್ನ ಎಂಬ ಶಬ್ದದಲ್ಲಿಯ ಅಕಾರ ನ್‌ಕಾರಗಳನ್ನು ತೆಗೆದರೆ (ಅ) **ರತ** (ನ್) ರತ ಎಂಬ ಶಬ್ದವು ಉಳಿಯುತ್ತದೆ. ಇಲ್ಲಿ ಮೊದಲ ಅಕಾರವನ್ನೇ ಪರಿತ್ಯಜಿಸಬೇಕು. ನಕಾರದ ಮುಂದೆ ಇರುವ ಕೊನೆಯ ಅಕಾರವನ್ನು ಬಿಡಬಾರದು. ಹೀಗೆ ಆನಾರತ್ನ ಎಂದರೆ ರತ ಎಂಬ ಶಬ್ದ.

ರತ ಎಂಬ ಶಬ್ದಕ್ಕೆ ಸುರತ ಎಂದು ಅರ್ಥ. ಸುರತದಿಂದ ಸಮಾಯುಕ್ತರಲ್ಲ. ಆದ್ದರಿಂದ ಹನುಮಂತದೇವರು ನಾನಾರತ್ನಸಮಾಯುಕ್ತರು. ಸ್ತ್ರೀಸಂಪರ್ಕ ವಿಲ್ಲದವರು, ಬ್ರಹ್ಮಚಾರಿಗಳು ಎಂದು ಅಭಿಪ್ರಾಯ. **ಆನಾರತ್ನಸಮಾಯುಕ್ತ** ಎಂದರೆ ಸುರತದಿಂದ ಯುಕ್ತರು. ಹನುಮಂತದೇವರು ಸುರತಾದಿಗಳಿಗಾಗಿ, ಸ್ತ್ರೀಯರನ್ನು ರಂಜಿಸುವುದಕ್ಕಾಗಿ ರತ್ನಗಳನ್ನು ಧರಿಸುವುದಿಲ್ಲ. ಕೇವಲ ಭಗವತ್ಪ್ರೀತ್ಯರ್ಥ, ಅಂತರ್ಯಾಮಿಯಾದ ಭಗವಂತನಿಗೆ ಅಲಂಕಾರ ಎಂಬುದಾಗಿ ಆಭರಣಗಳನ್ನು ಧರಿಸಿದ್ದಾರೆ. ನಾನಾರತ್ನಸಮಾಯುಕ್ತ ಎಂಬುದಕ್ಕೆ ಇಷ್ಟು ಅರ್ಥವನ್ನು ತಿಳಿಯಬೇಕು.

६) अनस्य रत्नानि अनरत्नानि, न अनरत्नानि अनारत्नानि । न साध्याधिकरणं साध्यानधिकरणमिति यथा । अनारत्नसमायुक्तानि न भवन्तीति नानारत्नसमायुक्तानि । तादृशकुण्डलादिभिर्विराजितम् । नतु अन्यदीयतत्समायुक्तताद्विराजितम् ।

**ಅನ**=ಪ್ರಾಣದೇವರು, **ಅನರತ್ನ**=ಪ್ರಾಣದೇವರ ರತ್ನಗಳು. **ಅನಾರತ್ನ**= ಪ್ರಾಣದೇವರದ್ದಲ್ಲದ ಬೇರೆಯವರ ರತ್ನಗಳು ಎಂದು ಅರ್ಥ. ಅನಾರತ್ನಸಮಾಯುಕ್ತರಲ್ಲ. ಆದ್ದರಿಂದ ನಾನಾರತ್ನಸಮಾಯುಕ್ತರು ವಾಯುದೇವರು. ಅಂದರೆ, ಕಪಿರೂಪರಾದ ವಾಯುದೇವರಿಗೆ ಸ್ವಂತ ರತ್ನಗಳೇ ಇಲ್ಲ. ಅವರು ಮತ್ತೊಬ್ಬರ ರತ್ನಗಳನ್ನು ಧರಿಸಿದ್ದಾರೆ ಎಂದು ತಿಳಿಯುವುದು ಸರಿಯಲ್ಲ. ತಮ್ಮದೇ ಆದ ರತ್ನಗಳನ್ನು ವಾಯುದೇವರು ಧರಿಸಿದ್ದಾರೆ. ಆದ್ದರಿಂದ ನಾನಾರತ್ನಸಮಾಯುಕ್ತ ಎಂದು ಸ್ತುತಿಸಿದ್ದಾರೆ.

**७) रामस्य दूतमिति प्रथमावतारविवक्षया । नानेति द्वितीयावतारविवक्षया । सर्वशत्रुनिवारणमिति निरुक्तरीत्या तृतीयावतारविवक्षया । तदा तु नानास्त्रीभिः रत्नानि सुरतानि ''रतिधारकोत्तमत्वात्स रत्नधातम ईरितः'' इति ऋग्भाष्योक्तेः, रत्नशब्दस्य रत्यर्थकत्वम् । तत्समायुक्तः । भीमः काली-द्रौपदी-हिडिम्बी-रौहिणेयीदेवी(२०) वासुदेवीभिः चतुर्विंशतिसंख्याकाभिः पत्नीभिर्युक्त इति महाभारत तात्पर्यनिर्णये (अ.३०.श्लो.१०-११-१२) कथनात् । स चासौ कुण्डलादिविराजितश्च तम् ।**

೧. **ರಾಮಸ್ಯ ದೂತಂ** ಎಂಬುದರಿಂದ ಪ್ರಥಮಾವತಾರವನ್ನು ಸ್ತುತಿಸುತ್ತಿದ್ದಾರೆ. ೨. **ನಾನಾರತ್ನಸಮಾಯುಕ್ತಂ** ಎಂದು ಭೀಮಾವತಾರವನ್ನು ಸ್ತುತಿಸುತ್ತಿದ್ದಾರೆ. ಭೀಮಸೇನದೇವರು ಸ್ವಯಂ ಗೃಹಸ್ಥರಾಗಿದ್ದಾರೆ. ಅವರು ಒಟ್ಟು ೨೪ ಜನ ಸ್ತ್ರೀಯರನ್ನು ವಿವಾಹವಾಗಿದ್ದಾರೆ. ೧. ದ್ರೌಪದೀ, ೨. ಕಾಲೀ, ೩. ಹಿಡಿಂಬೀ, ೪. ರೋಹಿಣಿಯ ಮಗಳು ದೇವೀ ಮತ್ತು ವಸುದೇವನ ೨೦ ಜನ ಹೆಣ್ಣುಮಕ್ಕಳು. ಹೀಗೆ ಭೀಮಸೇನದೇವರು ೨೪ ಜನ ಸ್ತ್ರೀಯರನ್ನು ವಿವಾಹವಾಗಿದ್ದಾರೆ. ಆ ಎಲ್ಲ ಸ್ತ್ರೀಯರನ್ನು ಸಂತೋಷಪಡಿಸಲು, ಅವರ ಅಂತರ್ಯಾಮಿಯಾದ, ಸ್ವಾಂತರ್ಯಾಮಿಯಾದ ಪರಮಾತ್ಮನನ್ನು ಸಂತೋಷಪಡಿಸಲು ಭೀಮಸೇನದೇವರು ನಾನಾರತ್ನಗಳಿಂದ ಸಮಾಯುಕ್ತರಾಗಿದ್ದಾರೆ. ಆದ್ದರಿಂದ ಈ ಪದವು ಭೀಮಾವತಾರವನ್ನು ಸ್ತುತಿಸುತ್ತದೆ. ೩. **ಸರ್ವಶತ್ರುನಿವಾರಣಂ** ಎಂದು ಮಧ್ವಾವತಾರವನ್ನು ಸ್ತುತಿಸುತ್ತಿದ್ದಾರೆ. ಭಗವಂತನ ಗುಣಪೂರ್ಣತ್ವ

ಮುಂತಾದವುಗಳನ್ನು ವಿರೋಧಿಸುವ ವಾದಿಗಳನ್ನು ನಿಗ್ರಹಿಸಿದ್ದಾರೆ. ಆದ್ದರಿಂದ ಈ ವಿಶೇಷಣವು ಮಧ್ವರನ್ನು ಸ್ತುತಿಸುತ್ತದೆ. ಈ ವಿಷಯವನ್ನು ಹಿಂದೆಯೇ ವಿಸ್ತಾರವಾಗಿ ತಿಳಿಸಿ ಆಗಿದೆ.

**८) ''जातौ जातौ यदुत्कृष्टं तद्रत्नमभिधीयते'' इति कथनात् जगति तत्तज्जातौ ये उत्कृष्टाः तैः सर्वैः शुभैः पदार्थैः युतम्, इति नानारत्नसमायुक्तशब्दार्थः । स चासौ कुण्डलादिविराजितश्च तम् ।**

ರತ್ನ ಎಂದರೆ ಶ್ರೇಷ್ಠ ಎಂದು ಅರ್ಥ. ನಾನಾರತ್ನ ಎಂದರೆ ನಾನಾಜಾತಿಯ ಪದಾರ್ಥಗಳಲ್ಲಿ ಉತ್ಕೃಷ್ಟವಾದವುಗಳು. ಅವುಗಳಿಂದ ಸಮಾಯುಕ್ತರು ವಾಯುದೇವರು. ಆದ್ದರಿಂದ ಅವರನ್ನು ನಾನಾರತ್ನಸಮಾಯುಕ್ತ ಎಂದು ಕೊಂಡಾಡುತ್ತಿದ್ದಾರೆ.

ಆಯಾ ಜಾತಿಯ ವಸ್ತುಗಳಲ್ಲಿ ಉತ್ತಮೋತ್ತಮವಾದ ಎಲ್ಲವನ್ನು ವಾಯುದೇವರು ಪಡೆದಿದ್ದಾರೆ. ಆದ್ದರಿಂದ ವಾಯುದೇವರು ನಾನಾರತ್ನಸಮಾಯುಕ್ತರಾಗಿದ್ದಾರೆ ಎಂದು ಅಭಿಪ್ರಾಯ.

### ಸರ್ವದಾಭೀಷ್ಟದಾತಾರಮ್

**१) ''नानाशब्दो विनार्थे स्यात् तथाऽनेकोभयार्थयोः'' इति मेदिनीकोशात् नानाशब्दो विना इत्यर्थेऽपि वर्तते । तथाच नानेति भिन्नं पदम् । रत्नसमायुक्तकुण्डलादिविराजितं नाना विना अन्येभ्यः सर्वदाभीष्टदातारं सर्वाभीष्टप्रदज्ञानरूपाभीष्टदातारम् । अस्यां विवक्षायां सर्वदाभीष्टदातारमित्येकं पदम् । भगवतः अपरोक्षज्ञानस्य सर्वाभीष्टप्रदत्वं ''यावानर्थ उदपाने सर्वतः सम्प्लुतोदके । तावान्सर्वेषु वेदेषु ब्राह्मणस्य विजानतः ।।'' (२.४६) इति भगवद्गीतया सिद्धम् । रत्नेत्यादिना भोगसक्तो लक्ष्यते । तं विनेत्यनेन ''विरक्तानामेव च ज्ञानम्'' इति भाष्योक्तं विवक्षितम् ।**

ನಾನಾ ಎಂಬುದು ಭಿನ್ನಪದ ಎಂದು ತಿಳಿಯಬೇಕು. **ರತ್ನಸಮಾಯುಕ್ತ-ಕುಂಡಲಾದಿವಿರಾಜಿತಂ ನಾನಾ** ಅನ್ಯೇಭ್ಯಃ **ಸರ್ವದ ಅಭೀಷ್ಟದಾತಾರಮ್**. ಎಂಬುದಾಗಿ ಅನ್ವಯ ತಿಳಿಯಬೇಕು.

**ಸರ್ವದ ಅಭೀಷ್ಟ** ಎಲ್ಲವನ್ನು ಕೊಡುವ ಅಭೀಷ್ಟ ಎಂದರೆ ಅಪರೋಕ್ಷಜ್ಞಾನ. ಇಂಥ ಅಪರೋಕ್ಷಜ್ಞಾನವನ್ನು ವಾಯುದೇವರು ಕೊಡುತ್ತಾರೆ. ಆದರೆ ಈ ಅಪರೋಕ್ಷವನ್ನು ಸರ್ವರಿಗೆ ಕೊಡುವುದಿಲ್ಲ. ರತ್ನಕುಂಡಲಾದಿಗಳನ್ನು ಧರಿಸಿ ಕೇವಲ ಭೋಗಾಸಕ್ತರಾದ ಜನರಿಗೆ ವಾಯುದೇವರು ಈ ಅಭೀಷ್ಟವನ್ನು ಕೊಡುವುದಿಲ್ಲ. ವಿರಕ್ತರಾದವರಿಗೆ ಮಾತ್ರ ಸರ್ವದವಾದ ಅಪರೋಕ್ಷಜ್ಞಾನವನ್ನು ನೀಡುತ್ತಾರೆ. ''ವಿರಕ್ತಾನಾಮೇವ ಚ ಜ್ಞಾನವಮ್'' ಎಂಬ ವಚನ ಈ ವಿಷಯದಲ್ಲಿ ಪ್ರಮಾಣವಾಗಿದೆ.

ಅಪರೋಕ್ಷಜ್ಞಾನವು ಎಲ್ಲವನ್ನೂ ಕೊಡುತ್ತದೆ ಎಂಬ ವಿಷಯದಲ್ಲಿ ''ಯಾವಾನರ್ಥ...'' ಎಂಬ ಗೀತಾವಾಕ್ಯವು ಪ್ರಮಾಣವಾಗಿದೆ.

ಸರ್ವವನ್ನು ನೀಡುವ ಅಭೀಷ್ಟ ಅಪರೋಕ್ಷಜ್ಞಾನ. ಅಂಥ ಅಪರೋಕ್ಷವನ್ನು ಭೋಗಾಸಕ್ತರಾಗದ ವಿರಕ್ತರಿಗೆ ವಾಯುದೇವರು ನೀಡುತ್ತಾರೆ. ಆದ್ದರಿಂದ ವಾಯುದೇವರು ಸರ್ವದಾಭೀಷ್ಟದಾತೃಗಳೆಂದು ವ್ಯಾಸರಾಜರು ಸ್ತುತಿಸುತ್ತಿದ್ದಾರೆ.

**२) सर्वदा अभीष्टदातारमिति भिन्ने वा पदे । यथेतरत्र राजादिभिरभीष्टदानार्थं समयनिर्बन्धः कृतस्तिष्ठति न तथाऽत्रेति भावः । श्वासोच्छ्वासरूपः जीवस्वरूपगतचैतन्यप्रेरणरूपः मनआदि-इन्द्रियप्रेरणरूपो वा अभीष्टः अह्नि दीयते न रात्रौ इति, रात्रौ दीयते नाह्नि इति वा, अद्य न श्वः इति, परश्व इति वा यद्युच्यते मातरिश्वना का दशा स्यात्समेषां जीवानामित्यालोचयन्तु सन्तः ।**

ಸರ್ವದಾ ಅಭೀಷ್ಟದಾತಾರಂ ಎಂಬ ಪದಗಳು ಬೇರೇ ಬೇರೇ ಎಂದು ಇಟ್ಟುಕೊಳ್ಳಬೇಕು. ಲೋಕದಲ್ಲಿ ರಾಜರು ಮುಂತಾದವರು ಅಭೀಷ್ಟಗಳನ್ನು ನೀಡುವುದಕ್ಕಾಗಿ ಒಂದು ಸಮಯವನ್ನು ನಿಗದಿಪಡಿಸಿಕೊಂಡಿರುತ್ತಾರೆ. ಆ ನಿಗದಿತ ಸಮಯ ಕಳೆದ ಮೇಲೆ ಏನನ್ನೂ ನೀಡುವುದಿಲ್ಲ.

ಹಾಗೆ ನಮ್ಮ ಅಭೀಷ್ಟಗಳನ್ನು ನೀಡಲು ವಾಯುದೇವರು ಸಮಯನಿರ್ಬಂಧ ಮಾಡಿಕೊಂಡಿಲ್ಲ. ಮಾಡಿಕೊಳ್ಳುವುದೂ ಇಲ್ಲ. ಹಾಗೆ ಸಮಯನಿರ್ಬಂಧ ಮಾಡಿಕೊಂಡರೆ ಯಾವ ಜೀವರೂ ಇರಲು ಸಾಧ್ಯವೇ ಇಲ್ಲ.

ನಾವು ಮಲಗಿದರೂ ಶ್ವಾಸೋಚ್ಛ್ವಾಸ ಮಾಡುತ್ತಲೇ ಇರಬೇಕೆಂದು ನಮ್ಮ ಅಭೀಷ್ಟ. ಆ ಅಭೀಷ್ಟವನ್ನು ವಾಯುದೇವರು ಪೂರೈಸುತ್ತಾರೆ. ಮನಸ್ಸು ಮುಂತಾದ ಎಲ್ಲ ಇಂದ್ರಿಯಗಳನ್ನು ವಾಯುದೇವರೇ ಪ್ರೇರಿಸುತ್ತಾರೆ. ಇನ್ನೂ ಕೋಟಿ ಕೋಟಿ ಅಭೀಷ್ಟಗಳನ್ನು ವಾಯುದೇವರೇ ಪೂರ್ಣಮಾಡುತ್ತಾರೆ. ಈ ಅಭೀಷ್ಟಗಳನ್ನು ಹಗಲು ಮಾತ್ರ ಪೂರ್ಣ ಮಾಡುತ್ತೇನೆ. ರಾತ್ರಿ ಮಾಡುವುದಿಲ್ಲ ಎಂದಾಗಲೀ, ರಾತ್ರಿ ಮಾತ್ರ ಪೂರೈಸುತ್ತೇನೆ, ಹಗಲು ಪೂರ್ಣಮಾಡುವುದಿಲ್ಲ ಎಂದಾಗಲೀ, ಇವತ್ತು ಕೊಡುವುದಿಲ್ಲ ನಾಳಿಗೆ ಕೊಡುತ್ತೇನೆ, ನಾಡಿದ್ದು ಕೊಡುತ್ತೇನೆ ಎಂದಾಗಲೀ ವಾಯುದೇವರು ಹೇಳಿದರೆ ಜೀವರ ಪಾಡೇನು? ಈ ವಿಷಯವನ್ನು ಸಜ್ಜನರು ಆಲೋಚಿಸಬೇಕು.

**३) सर्वं भगवन्तं ददति शिष्येभ्य उपदिशन्ति इति सर्वदाः पाठप्रवचननिरता ज्ञानिनः तेभ्यः अभीष्टदातारम् । ''सर्वः शर्वः शिवः'' इति विष्णुसहस्रनामसु ।**

ಸರ್ವ ಎಂದರೆ ಪರಮಾತ್ಮ ಎಂದು ಅರ್ಥ. ''ಸರ್ವಃ ಶರ್ವಃ ಶಿವಃ ಸ್ಥಾಣುಃ'' ಎಂದು ವಿಷ್ಣುಸಹಸ್ರನಾಮವು ಈ ವಿಷಯದಲ್ಲಿ ಪ್ರಮಾಣವಾಗಿದೆ. **ಸರ್ವ** ಪರಮಾತ್ಮ. **ದ** ಅಂಥ ಪರಮಾತ್ಮನನ್ನು ದಾನ ಮಾಡುವ, ಶಿಷ್ಯರಿಗೆ ಉಪದೇಶ ಮಾಡುವ, ಪಾಠ-ಪ್ರವಚನಗಳಲ್ಲಿ ನಿರತರಾದ ಜ್ಞಾನಿಗಳು **ಸರ್ವದ** ಎನಿಸುತ್ತಾರೆ. ಅಂಥವರ ಎಲ್ಲವಿಧವಾದ ಅಭೀಷ್ಟಗಳನ್ನು ವಾಯುದೇವರು ಪೂರೈಸುತ್ತಾರೆ. ಆದ್ದರಿಂದ **ಸರ್ವದಾಭೀಷ್ಟದಾತಾರಂ** ಎಂದು ವಾಯುದೇವರನ್ನು ಸ್ತುತಿಸಿದ್ದು ಸಮುಚಿತವೇ ಆಗಿದೆ.

**४) ''सर्वं पूर्णमिहोच्यते'' भावप्रधाननिर्देशः । सर्वं सर्वत्वं भगवतो गुणपूर्णत्वं ददति उपदिशन्तीति सर्वदाः तदभीष्टदातारम् ।**

ಸರ್ವ ಎಂದರೆ ಪೂರ್ಣ ಎಂದು ಅರ್ಥ. ಪ್ರಕೃತ ಪೂರ್ಣತ್ವ ಎಂಬ ಅರ್ಥವನ್ನು ತಿಳಿಯಬೇಕು. ಭಗವಂತನ ಗುಣಪೂರ್ಣತ್ವವನ್ನು ದಾನ ಮಾಡುವವರು, ಭಗವಂತ ಅನಂತಗುಣಪರಿಪೂರ್ಣ ಎಂದು ಉಪದೇಶ ಮಾಡುವವರು ಸರ್ವದರು. ಅಂಥವರ ಅಭೀಷ್ಟಗಳನ್ನು ಪೂರೈಸುತ್ತಾರೆ ಆದ್ದರಿಂದ ಹನುಮಂತದೇವರು ಸರ್ವದಾಭೀಷ್ಟದಾತೃಗಳು.

५) सर्वं भगवतः सर्वसृष्ट्यादिकर्तृत्वं ददति उपदिशन्ति इति वा सर्वदाः तदभीष्टदातारम् । ''स्रष्टा पाता च'' इत्यादि प्रागुक्तमानात् ।

ಸರ್ವ ಎಂದರೆ ಸರ್ವತ್ವ ಎಂದು ಅರ್ಥ. ಸರ್ವತ್ವ ಎಂದರೆ ಸರ್ವಸೃಷ್ಟ್ಯಾದಿ ಕರ್ತೃತ್ವ ಎಂದು ಅರ್ಥ. ಸರ್ವತ್ವವನ್ನು ಭಗವಂತನ ಸರ್ವಸೃಷ್ಟ್ಯಾದಿಕರ್ತೃತ್ವವನ್ನು ದಾನ ಮಾಡುವವರು, ಉಪದೇಶ ಮಾಡುವವರು ಸರ್ವದರು. ಅವರಿಗೆ ಅಭೀಷ್ಟಗಳನ್ನು ನೀಡುವ ಹನುಮಂತದೇವರು ಸರ್ವದಾಭೀಷ್ಟದಾತೃಗಳೆನಿಸುತ್ತಾರೆ.

**ಸತಾಂ ವೈ ದೃಢಮಾಹವೇ**

१) सतामाहवे दृढम् । सतां असद्भिः सह आहवे युद्धे दृढं सत्पक्षे दृढम् । सज्जनपक्षे स्थित्वा तद्रक्षणकर्तारमिति यावत् । अवतारत्रयेऽपि दृष्टमेतत् ।

ಆಹವ ಎಂದರೆ ಯುದ್ಧ ಎಂದು ಅರ್ಥ. **ಆಹವೇ** ಸಜ್ಜನರಿಗೆ, ದುಷ್ಟಜನರಿಗೆ ಯುದ್ಧ ನಡೆದಾಗ, **ಸತಾಂ ದೃಢಂ** ಸಜ್ಜನರ ಪಕ್ಷದಲ್ಲಿಯೇ ಸ್ಥಿರವಾಗಿ ಇದ್ದು ಅವರನ್ನು ಸಂರಕ್ಷಿಸುತ್ತಾರೆ ವಾಯುದೇವರು. ಮೂರು ಅವತಾರಗಳಲ್ಲಿಯೂ ಈ ವ್ಯಾಪಾರವು ದೃಷ್ಟವಾಗಿದೆ.

२) सतां आहवे सत्कर्तृके यज्ञे दृढं तन्निर्वर्तनाय ऋत्विग्यजमनादिषु दार्ढ्येन स्थितं फलदानाय देवादिषु दार्ढ्येन स्थितमित्यर्थः ।

ಅಥವಾ ಆಹವ ಎಂದರೆ ಯಾಗ ಎಂದು ಅರ್ಥ. **ಸತಾಂ** ಸಜ್ಜನರು ಮಾಡುವ **ಆಹವೇ** ಯಾಗದಲ್ಲಿ **ದೃಢಂ** ಸ್ಥಿರವಾಗಿ ಇರುತ್ತಾರೆ.

ಸಜ್ಜನರು ಮಾಡುವ ಯಾಗವು ಸುಸಂಪನ್ನವಾಗಬೇಕು. ಅದಕ್ಕಾಗಿ ಋತ್ವಿಜರಲ್ಲಿ, ಯಜಮಾನರಲ್ಲಿ, ಯಜ್ಞದ್ರವ್ಯಗಳಲ್ಲಿ ವಾಯುದೇವರು ಸನ್ನಿಹಿತರಾಗುತ್ತಾರೆ. ಹೀಗೆ ಎಲ್ಲ ಕಡೆ ಇದ್ದು ಸಜ್ಜನರ ಯಜ್ಞ ವೈಭವೋಪೇತವಾಗುವಂತೆ ಮಾಡುತ್ತಾರೆ.

ಭಗವಂತನಿಗೆ ಪ್ರಾರ್ಥನೆ ಮಾಡಿ, ಆ ಯಾಗದ ಫಲವು ನಮಗೆ ದೊರೆಯುವಂತೆ ಮಾಡುತ್ತಾರೆ ವಾಯುದೇವರು. ಆದ್ದರಿಂದ **ಸತಾಂ ಆಹವೇ ದೃಢಮ್** ಎಂಬ ಸ್ತುತಿ ಸುಸಂಗತವಾಗಿದೆ.

**ತುಂಗಾಂಬೋಧಿತರಂಗಸ್ಯ ವಾತೇನ**
**ಪರಿಶೋಭಿತೇ ದಕ್ಷಿಣಸ್ಥಗಿರೌ ಸದಾ ವಾಸಿನಮ್**

**चक्रतीर्थस्य तुङ्गभद्रानदीस्थचक्रनामकजलावर्तयुक्तचक्राकारतीर्थ-विशेषस्य दक्षिणस्थ गिरौ दक्षिणभागस्थे शैले तुङ्गाम्भोधितरङ्गस्य तुङ्गाशब्दितनदीरूपजलनिधेः यस्तरङ्गसमुदायः तत्सम्बन्धिना वातेन वायुना परिशोभिते अलङ्कृते शैत्यपावनात्वादिविशिष्ट इति यावत् । सदा वासिनम् सर्वदा निवसन्तम् ।**

ಯಂತ್ರೋದ್ಧಾರಕಪ್ರಾಣದೇವರು ಇದ್ದ ಆ ಪ್ರದೇಶದಲ್ಲಿ ಚಕ್ರತೀರ್ಥವು ಪ್ರತ್ಯೇಕವಾಗಿ ಇಲ್ಲ. ಅಲ್ಲಿಯ ತುಂಗಭದ್ರಾ ನದಿಯಲ್ಲಿಯೇ ಚಕ್ರನಾಮಕವಾದ ಚಕ್ರಾಕಾರವಾದ ಸುಳಿ ಇದೆ. ಅದುವೇ ಚಕ್ರತೀರ್ಥವೆಂದು ಪ್ರಸಿದ್ಧವಾಗಿದೆ. ಅಂಥ ಚಕ್ರತೀರ್ಥದ ಬಲಭಾಗದ ಪರ್ವತದಲ್ಲಿ ವಾಯುದೇವರು ವಿರಾಜಿತರಾಗಿದ್ದಾರೆ. ಸಮುದ್ರದಂತೆ ವಿಸ್ತಾರವಾಗಿದೆ ಆ ತುಂಗಾನದಿ. ಆ ತುಂಗಾನದಿಯ ತೆರಗಳ ಸಂಪರ್ಕದಿಂದ ತಂಪಾದ ಗಾಳಿ ಹನುಮಂತದೇವರನ್ನು ಸದಾ ಸೇವಿಸುತ್ತದೆ. ಶೈತ್ಯ-ಪಾವನತ್ವಗಳಿಂದ ಸಂಪನ್ನವಾದ ಪ್ರದೇಶದಲ್ಲಿ ವಾಯುದೇವರು ವಿರಾಜಿತರಾಗಿದ್ದಾರೆ ಎಂದು ಅಭಿಪ್ರಾಯ. ಆ ಪರ್ವತದ ದೇವಾಲಯದಲ್ಲಿರುವ ಪ್ರತಿಮೆಯಲ್ಲಿ ಸದಾ ಸನ್ನಿಹಿತರಾಗಿದ್ದಾರೆ ಎಂದು ಅಭಿಪ್ರಾಯ.

## ಚಕ್ರತೀರ್ಥಸ್ಯ ರಾಮಸ್ಯ ದೂತಂ

**यद्वा चक्रतीर्थस्य इत्यस्य चक्राभिमानिदुर्गायाः कामस्य च गुरोः इत्यर्थः । रामस्य इत्यनेन व्यवहितेनापि अन्वयः ।**

ಅಥವಾ ಚಕ್ರತೀರ್ಥಸ್ಯ ಎಂಬುದು ವಿಶೇಷಣ. ದೂರದಲ್ಲಿದ್ದರೂ ರಾಮಸ್ಯ ಎಂಬ ಪದದ ಜೊತೆ ಚಕ್ರತೀರ್ಥಸ್ಯ ರಾಮಸ್ಯ ದೂತಂ ಎಂದು ಅನ್ವಯ ಮಾಡಿಕೊಳ್ಳಬೇಕು.

ಚಕ್ರ ಎಂದರೆ ಚಕ್ರಾಭಿಮಾನಿಯಾದ ದುರ್ಗಾದೇವಿ ಮತ್ತು ಕಾಮ ಎಂದು ಅರ್ಥ. ಅವರಿಗೆ ತೀರ್ಥರು ಗುರುಗಳು ಎಂದು ಅರ್ಥ. ಚಕ್ರಾಭಿಮಾನಿಗಳಾದ ದುರ್ಗಾದೇವಿಗೆ ಮತ್ತು ಕಾಮನಿಗೆ ದೇವರು ಗುರುಗಳಾಗಿದ್ದಾರೆ. ಅಂಥ ರಾಮಚಂದ್ರದೇವರಿಗೆ ಹನುಮಂತದೇವರು ದೂತರಾಗಿದ್ದಾರೆ.

ಭಗವಂತ ಎಲ್ಲರಿಗೂ ಗುರುವಾಗಿದ್ದಾನೆ. ರಮಾದೇವಿಗೆ, ಕಾಮನಿಗೆ ಗುರುವೆಂದು ಚಿಂತಿಸುವಲ್ಲಿ ಔಚಿತ್ಯವೇನಿದೆ? ಸುಂದರವಾದ ಔಚಿತ್ಯ ಇದೆ.

ರಮಾದೇವಿಯ ಗುರುವಾಗಿದ್ದಾನೆ ಭಗವಂತ. ಕಾಮನಿಗೆ ಭಗವಂತ ಗುರುವಾಗಿದ್ದಾನೆ. ಅಂಥ ಭಗವಂತನಿಗೆ ವಾಯುದೇವರು ದೂತರಾಗಿದ್ದಾರೆ ಎಂದು ಈಗ ಹೇಳಲಾಗುತ್ತಿದೆ.

ದೂತ ಎಂದರೆ ಸಂದೇಶಗಳನ್ನು ತಲುಪಿಸುವವನು ಎಂಬ ಅರ್ಥವನ್ನು ಪ್ರಕೃತ ಸ್ಮರಿಸಿಕೊಳ್ಳಬೇಕು.

ರಮಾದೇವಿಗೆ ಭಗವಂತ ಮಹಿದಾಸರೂಪದಿಂದ ಐತರೇಯೋಪನಿಷತ್ತನ್ನು ಉಪದೇಶ ಮಾಡಿದ್ದಾನೆ. ಹೀಗಾಗಿ ರಮೆಗೆ ಗುರುವಾಗಿದ್ದಾನೆ. ಆ ಐತರೇಯೋಪನಿಷತ್ತಿಗೆ ಭಾಷ್ಯ ಬರೆದು ರಮಾಗುರುವಾದ ಭಗವಂತನ ಸಂದೇಶಗಳನ್ನು ಹನುಮಂತದೇವರು ಮಧ್ವರೂಪದಿಂದ ಯೋಗ್ಯರಿಗೆ ತಲುಪಿಸಿದ್ದಾರೆ. ಹೀಗಾಗಿ ಹನುಮಂತದೇವರು ರಮಾಗುರುವಾದ ಭಗವಂತನಾದ ರಾಮಚಂದ್ರದೇವರ ದೂತರು ಎಂದು ಹೇಳಿದ್ದು ಸಂಗತವಾಗಿದೆ.

ಮತ್ತು ಸನಕಾದಿಗಳು ಮಾಡಿದ ಪ್ರಶ್ನೆಗೆ ಹಂಸನಾಮಕ ಪರಮಾತ್ಮ ಉತ್ತರ ನೀಡಿದ್ದಾನೆ. ಈ ಹಂಸೋಪದೇಶ ಭಾಗವತದ ಏಕಾದಶಸ್ಕಂಧದ

ಹದಿಮೂರನೆಯ ಅಧ್ಯಾಯದಲ್ಲಿ ಪ್ರಸಿದ್ಧವಾಗಿದೆ. ಆ ಸನಕಾದಿಗಳಲ್ಲಿ ಇರುವ ಸನತ್ಕುಮಾರನೇ ಕಾಮ. ಸನತ್ಕುಮಾರನಿಗೂ ಅಲ್ಲಿ ಉಪದೇಶವಾಗಿದೆ. ಹೀಗಾಗಿ ಭಗವಂತ ಕಾಮನಿಗೂ ಗುರುವಾಗಿದ್ದಾನೆ. ವಾಯುದೇವರಾದ ಶ್ರೀಮದಾಚಾರ್ಯರು ಈ ಹಂಸೋಪದೇಶವನ್ನು ವ್ಯಾಖ್ಯಾನ ಮಾಡುವ ಮೂಲಕ ಸಮಸ್ತ ಸಜ್ಜನರಿಗೆ ತಲುಪಿಸಿದ್ದಾರೆ. ಆದ್ದರಿಂದ ಕಾಮನ ಗುರುವಾದ ರಾಮನ ದೂತ ಹನುಮಂತ ಎಂದು ಹೇಳಿದ್ದು ಪ್ರಕೃತ ಉಚಿತವಾಗಿದೆ.

### ದಕ್ಷಿಣಸ್ಥಗಿರೌ ಸದಾ ವಾಸಿನಮ್

**१) दक्षिणस्थगिरौ इत्यस्य एवमर्थः । नहि जगदाधारकूर्मरूपिणं वायुं धर्तुमयं गिरिः समर्थः । अत एव भीमगात्रस्पर्शेन गिरिः शतधा अभिद्यत इति भारते श्रूयते । किन्तु लक्ष्मीनारायणौ आश्रितः वायुः तिष्ठति गिरौ । तथा च जडे गिरौ वायुः वर्तते अन्तर्यामी । स च लक्ष्मीनारायणाश्रितः । तस्मिन् लक्ष्मीनारायणाश्रिते गिरिस्थे स्वस्वरूपे एव वस्तुतो वायुस्तिष्ठति, न तु जडे ।**

ದಕ್ಷಿಣಸ್ಥಗಿರೌ ಎಂಬುದಕ್ಕೆ ಹೀಗೆ ಅರ್ಥವನ್ನು ತಿಳಿಯಬೇಕು. ಕೂರ್ಮರೂಪಿಯಾದ ವಾಯುದೇವರು ಜಗತ್ತಿಗೆ ಆಧಾರವಾಗಿದ್ದಾರೆ. ಅಂಥ ಜಗದ್ಧಾರಕರಾದ ವಾಯುದೇವರನ್ನು ಧರಿಸುವ ಸಾಮರ್ಥ್ಯ ಈ ಪರ್ವತಕ್ಕೆ ಇಲ್ಲ.

ಪ್ರಸಿದ್ಧವಾದ ಕಥೆ ಒಂದಿದೆ. ಭೀಮಸೇನದೇವರ ಶರೀರದ ಸ್ಪರ್ಶದಿಂದ ಶತಶೃಂಗಪರ್ವತವೂ ನುಚ್ಚು ನೂರಾಯಿತು. ನೂರು ಚೂರಾಯಿತು. ಶತಶೃಂಗ ಎಂಬ ತನ್ನ ಹೆಸರನ್ನು ಸಾರ್ಥಕ ಮಾಡಿಕೊಂಡಿತು. ಹೀಗಾಗಿ ಜಡವಾದ ಪರ್ವತಕ್ಕೆ ವಾಯುದೇವರನ್ನು ಹೊತ್ತುಕೊಳ್ಳುವ ಸಾಮರ್ಥ್ಯವಿಲ್ಲ. ಕಿಂತು ಪರ್ವತದಲ್ಲಿರುವ ಲಕ್ಷ್ಮೀನಾರಾಯಣರು ಈ ವಾಯುದೇವರನ್ನು ಧರಿಸಿದ್ದಾರೆ ಎಂದು ತಿಳಿಯಬೇಕು.

ಜಡವಾದ ಪರ್ವತದಲ್ಲಿ ಅಂತರ್ಯಾಮಿಗಳಾಗಿ ವಾಯುದೇವರು ಇದ್ದಾರೆ. ಆ ವಾಯುದೇವರು ಲಕ್ಷ್ಮೀನಾರಾಯಣರನ್ನು ಆಶ್ರಯಿಸಿಕೊಂಡು ಇದ್ದಾರೆ. ಪರ್ವತದಲ್ಲಿರುವ ಲಕ್ಷ್ಮೀನಾರಾಯಣರಲ್ಲಿ ಆಶ್ರಿತವಾದ ತಮ್ಮ ಸ್ವರೂಪವನ್ನು ವಾಯುದೇವರು ಆಶ್ರಯಿಸಿಕೊಂಡು ಇದ್ದಾರೆ ಎಂಬುದಾಗಿ ತಿಳಿಯಬೇಕು.

२) तथाहि दक्षे इन यस्य स दक्षिण अर्धनारीरूपेण भगवता सह स्थिता रमा । पुंवच्छक्तिमत्वात् पुल्लिङ्गशब्दवाच्यत्वम् । अर्धभागे पुरुषस्य सत्वाद् वा । गिरिर्नाम वायुः । "गिरिः प्राणः समुद्दिष्टः" (४.२.२६) इति भागवततात्पर्योक्तिः । "अक्रूरः पेशलो दक्षो दक्षिणः क्षमिणां वरः" इति च । तथाच दक्षिणस्थगिरौ इत्यस्य लक्ष्मीनारायणस्थे वायौ इत्यर्थः, तत्र स्वस्मिन्नेव रूपे सदा वासिनम् । तेन न पर्वतभेदप्रसक्तिः ।

**ದಕ್ಷಿಣಾ** ಎಂದರೆ ರಮಾದೇವಿಯು. **ದಕ್ಷ**=ಬಲಭಾಗ ಇನ ಸ್ವಾಮಿಯಾದ ಪರಮಾತ್ಮ. ಅರ್ಧನಾರೀರೂಪದಿಂದ ಇರುವ ರಮಾದೇವಿಯ ಬಲಭಾಗದಲ್ಲಿ ಪರಮಾತ್ಮ ಇದ್ದಾನೆ. ಹೀಗಾಗಿ ದಕ್ಷಿಣಾ ಎಂದರೆ ರಮಾದೇವಿ. ಪುರುಷರಂತೆ ಶಕ್ತಿಯುಳ್ಳವಳಾದ್ದರಿಂದ ದಕ್ಷಿಣ ಎಂದು ಪುಲ್ಲಿಂಗಪ್ರಯೋಗವು ಉಪಪನ್ನವಾಗಿದೆ. ಉಳಿದ ಅರ್ಧಭಾಗದಲ್ಲಿ ಪುರುಷನೇ ಪರಮಾತ್ಮನೇ ಇದ್ದದ್ದರಿಂದಲೂ ಪುಲ್ಲಿಂಗಪ್ರಯೋಗವು ಯುಕ್ತವಾಗಿದೆ.

ಮತ್ತು ದಕ್ಷಿಣ ಎಂದರೇ ಪರಮಾತ್ಮ ಎಂದು ಅರ್ಥ. "ದಕ್ಷಿಣಃ ಕ್ಷಮಿಣಾಂ ವರಃ" ಎಂದು ವಿಷ್ಣುಸಹಸ್ರನಾಮವು ಹೇಳುತ್ತದೆ. ಗಿರಿ ಎಂದರೆ ಮುಖ್ಯಪ್ರಾಣದೇವರು ಎಂದು ಅರ್ಥ. **ದಕ್ಷಿಣಸ್ಥಗಿರೌ ಸದಾ ವಾಸಿನಂ** ದಕ್ಷಿಣನಾಮಕನಾದ ಪರಮಾತ್ಮನಲ್ಲಿ ಇರುವ ಗಿರಿನಾಮಕವಾದ ತಮ್ಮ ರೂಪದಲ್ಲಿಯೇ ತಾವು ಇದ್ದಾರೆ. ಹೊರತು ಪರ್ವತವು ತಮ್ಮನ್ನು ಹೊತ್ತುಕೊಂಡದ್ದಲ್ಲ ಎಂದು ತಿಳಿಯಬೇಕು. ಅಂತೂ ವಾಯುದೇವರು ಲಕ್ಷ್ಮೀನಾರಾಯಣರನ್ನು ಆಶ್ರಯಿಸಿಕೊಂಡಿದ್ದಾರೆ. ಹೊರತು ಪರ್ವತವನ್ನಲ್ಲ. ಎಂದು ತಿಳಿಯಬೇಕು.

ಪರ್ವತರೂಪವಾದ ತಮ್ಮಲ್ಲಿಯೇ ತಾವು (ವಾಯುದೇವರು) ಇದ್ದಾರೆ. ಆದ್ದರಿಂದ ತಮ್ಮ ಸ್ಪರ್ಶದಿಂದ ಪರ್ವತವು ಒಡೆಯಲು ಅವಕಾಶವಿಲ್ಲ ಎಂಬುದಾಗಿ ತಿಳಿಯಬೇಕು.

## ಎಲ್ಲ ದೇವತೆಗಳಲ್ಲಿ ವಾಸವಾಗಿದ್ದಾರೆ

अथवा, चक्रतीर्थस्य चक्रेण विष्णुसुदर्शनचक्रेण तप्तेन, गोपीचन्दलिप्तेन वा धृतेन तीर्थं तीर्थत्वं पावित्र्यं यस्य सः चक्रतीर्थः विष्णुभक्तो विप्रः, ''तीर्थीकुर्वन्ति तीर्थानि स्वात्मस्थेन गदाभृता'' इति प्रयोगात् । निर्देशस्य भावप्राधान्यं भावविद्गोचर एव । तस्य यो दक्षिणः दक्षिणकर्णः तत्स्थः यो गिरिः पूज्यदेवसमुदायः तत्र सदा वासिनम् । ''गिरिः पूज्येऽक्षि रुजि कन्दुके'' (हेम) इत्यभिधानम् । ''ब्रह्मा विष्णुश्च रुद्रश्च सोमः सूर्योऽनलस्तथा । ते सर्वे चापि तिष्ठन्ति कर्णे विप्रस्य दक्षिणे । इति ''पराशरः । वायुना विना ब्रह्मणो देहः पूतिमेष्यति इति बृहद्भाष्ये कथनाद् वायुः ब्रह्मदेहे तिष्ठतीति सिद्धम् । वायुप्रवेशे उत्थानं वायुर्निर्गमे पातश्च ब्रह्मदेहस्य इममेवार्थं द्रढयति । विष्णोः वाय्वाश्रयत्वं प्रसिद्धमेव । रुद्रसोमसूर्यानलेषु मनश्चक्षुर्वागभिमानिषु प्रेरकतया वायोः सत्वमपि श्रुतिशिरस्सु सिद्धम् ।

ಈ ವಾಕ್ಯಕ್ಕೆ ಮತ್ತೊಂದು ರೀತಿಯಾಗಿಯೂ ಅರ್ಥವನ್ನು ತಿಳಿಯಬಹುದು. **ಚಕ್ರತೀರ್ಥ** ಎಂದರೆ ವಿಷ್ಣುಭಕ್ತ ಎಂದು ಅರ್ಥ. **ಚಕ್ರ** ತಪ್ತವಾದ ವಿಷ್ಣುವಿನ ಸುದರ್ಶನಚಕ್ರವನ್ನು, ಅಥವಾ ಗೋಪೀಚಂದನದಿಂದ ಲಿಪ್ತವಾದ ಚಕ್ರಾದಿಮುದ್ರೆಗಳನ್ನು ಧರಿಸಿ **ತೀರ್ಥ** ತೀರ್ಥತ್ವವನ್ನು, ಪಾವಿತ್ರ್ಯವನ್ನು ಪಡೆದವನು ವಿಷ್ಣುಭಕ್ತನಾದ ಬ್ರಾಹ್ಮಣ ಚಕ್ರತೀರ್ಥ. **ಚಕ್ರತೀರ್ಥಸ್ಯ** ಅಂಥ ಬ್ರಾಹ್ಮಣನ **ದಕ್ಷಿಣ** ಬಲಕಿವಿ ಎಂದು ಅರ್ಥ, **ದಕ್ಷಿಣಸ್ಥ** ಆ ಕಿವಿಯಲ್ಲಿರುವ **ಗಿರಿ** ಪೂಜ್ಯರಾದ ದೇವತೆಗಳ ಸಮುದಾಯ ಎಂದು ಅರ್ಥ. **ದಕ್ಷಿಣಸ್ಥಗಿರೌ** ಆ ದೇವತೆಗಳ ಸಮುದಾಯದಲ್ಲಿ ವಾಸಮಾಡಿದವರು ಪ್ರಾಣದೇವರು ಎಂದು ಅರ್ಥ. ''ಗಿರಿಃ ಪೂಜ್ಯೇಽಕ್ಷಿ ಗಿರಿಕಂದುಕೇ'' ಎಂಬ ಕೋಶದಲ್ಲಿ ಗಿರಿಶಬ್ದ ಪೂಜ್ಯಾರ್ಥಕವಾಗಿದೆ ಎಂದು ಉಕ್ತವಾಗಿದೆ.

ಬ್ರಹ್ಮ-ವಿಷ್ಣು-ರುದ್ರ-ಚಂದ್ರ-ಸೂರ್ಯ-ಅಗ್ನಿ ಈ ಎಲ್ಲ ದೇವತೆಗಳು ಬ್ರಾಹ್ಮಣನ ಬಲಗಿವಿಯಲ್ಲಿ ಸನ್ನಿಹಿತರಾಗಿ ಇರುತ್ತಾರೆಂದು ಪರಾಶರರು ತಿಳಿಸುತ್ತಾರೆ.

ರುದ್ರಾದಿದೇವತೆಗಳಲ್ಲಿ ವಾಯುದೇವರು ಸನ್ನಿಹಿತರಾಗಿದ್ದಾರೆ ಎಂದು ಹೇಳಬಹುದು. ಆದರೆ ಬ್ರಹ್ಮದೇವರಲ್ಲಿ ವಾಯುದೇವರು ಇದ್ದಾರೆಯೇ? ಎಂಬ ಪ್ರಶ್ನೆಯು ಬರಬಹುದು. ಬ್ರಹ್ಮದೇವರಲ್ಲಿ ವಾಯುದೇವರು ಸನ್ನಿಹಿತರಾಗಿದ್ದಾರೆ. ವಾಯುದೇವರಲ್ಲಿ ಬ್ರಹ್ಮದೇವರು ಸನ್ನಿಹಿತರಾಗಿದ್ದಾರೆ. ಈ ವಿಷಯವನ್ನು ಬೃಹದಾರಣ್ಯಕೋಪನಿಷತ್ತು ಪ್ರತಿಪಾದಿಸಿದೆ. ಅವರಿಬ್ಬರು ಪರಸ್ಪರ ಆಶ್ರಯರಾಗಿದ್ದಾರೆ.

ಬ್ರಹ್ಮದೇವರಲ್ಲಿ ವಾಯುದೇವರು ಇಲ್ಲದಿದ್ದರೆ ಬ್ರಹ್ಮದೇವರ ದೇಹ ಕೊಳೆತು ಹೋಗುತ್ತದೆ ಎಂದು ಉಪನಿಷತ್ತು ತಿಳಿಸಿದೆ. ಆದ್ದರಿಂದ ವಾಯುದೇವರು ಬ್ರಹ್ಮದೇವರಲ್ಲಿ ಇದ್ದಾರೆ ಎಂದು ತಿಳಿಯಬೇಕು. ಇಷ್ಟೇ ಅಲ್ಲದೇ ವಾಯುದೇವರು ಬ್ರಹ್ಮದೇವರ ದೇಹವನ್ನು ತೊಲಗಿದಾಗ ಆ ದೇಹವು ಕೆಳಗೆ ಬಿದ್ದಿತು. ಮತ್ತೆ ವಾಯುದೇವರು ಬ್ರಹ್ಮದೇವರ ದೇಹವನ್ನು ಪ್ರವೇಶ ಮಾಡಿದಾಗ ಆ ದೇಹವು ಚೈತನ್ಯಯುಕ್ತವಾಯಿತು ಎಂಬ ಪ್ರಮೇಯವನ್ನು ಬೃಹದಾರಣ್ಯಕೋಪನಿಷತ್ತು ತಿಳಿಸುತ್ತದೆ.

ಈ ಪ್ರಮಾಣವಚನಗಳಿಂದ ಬ್ರಹ್ಮದೇವರಲ್ಲಿ ವಾಯುದೇವರು ಇದ್ದಾರೆ ಎಂಬುದು ಸಿದ್ಧವಾಗಿದೆ. ಮನಸ್ಸು-ಕಣ್ಣು-ಮಾತುಗಳಿಗೆ ಅಭಿಮಾನಿಗಳಾದ ರುದ್ರ-ಚಂದ್ರ-ಸೂರ್ಯರಲ್ಲಿ ಪ್ರೇರಕರಾಗಿ ವಾಯುದೇವರು ಇದ್ದಾರೆ ಎಂಬ ವಿಷಯವೂ ಉಪನಿಷತ್ಸಿದ್ಧವಾಗಿದೆ.

ಚಕ್ರತೀರ್ಥಸ್ಯ ದಕ್ಷಿಣಸ್ಥಗಿರೌ ಸದಾ ವಾಸಿನಂ ಎಂಬ ವಾಕ್ಯಕ್ಕೆ ಚಕ್ರಾದಿ ಚಿಹ್ನೆಗಳಿಂದ ಪಾವಿತ್ರ್ಯ ಪಡೆದ ಬ್ರಾಹ್ಮಣನ ಬಲಗಿವಿಯಲ್ಲಿ ಸನ್ನಿಹಿತರಾದ ದೇವತೆಗಳಲ್ಲಿ ವಾಯುದೇವರು ಸನ್ನಿಹಿತರಾಗಿದ್ದಾರೆ ಎಂಬ ಅರ್ಥವನ್ನು ತಿಳಿಯಬೇಕು.

**ತುಂಗಾಂಬೋಧಿತರಂಗಸ್ಯ ವಾತೇನ ಪರಿಶೋಭಿತೇ**
**ದಕ್ಷಿಣಸ್ಥಗಿರೌ ಸದಾ ವಾಸಿನಮ್**

**तुङ्गाम्भोधितरङ्गस्य वातेन परिशोभितत्वमस्य पूज्यदेवसमुदाय-रूपगिरेः कथमिति चेदित्थम् । तुङ्गः उन्नतः इतरापेक्षया उत्कृष्टः यः आम्भोधिः कर्मसागरः अम्भस्शब्दस्य कर्मवाचकत्वात् । तस्य यो तरङ्गः एकैकसुकर्मरूपः तस्य वातेन पुण्यरूपसौरभयुक्तवातेन पुण्येनेति यावत् परिशोभिते ।**

ತುಂಗಾಂಬೋಧಿತರಂಗಸ್ಯ ವಾತೇನ ಪರಿಶೋಭಿತೇ ಎಂಬುದು ದಕ್ಷಿಣಸ್ಥಗಿರೌ ಎಂಬುದಕ್ಕೆ ವಿಶೇಷಣವಾಗಿದೆ. ಹಾಗಾದರೆ ಆ ವಿಶೇಷಣವು ಇಲ್ಲಿ ಹೇಗೆ ಸಂಗತವಾಗುತ್ತದೆ ಎಂಬ ಸಮಸ್ಯೆ ಬರುತ್ತದೆ. ಆ ಸಮಸ್ಯೆಯೂ ಬೇಡ.

ತುಂಗ ಎಂದರೇ ಎತ್ತರವಾದದ್ದು ಎಂದು ಅರ್ಥ. ಅಂದರೆ ಮತ್ತೊಂದಕ್ಕಿಂತಲೂ ಉತ್ಕೃಷ್ಟವಾದದ್ದು ಎಂದು ಅರ್ಥ. ಅಂಬೋಧಿ ಎಂದರೆ ಸಾಗರ ಎಂದು ಅರ್ಥ ಇದೆ. ಆ ಸಾಗರ ಸಾಮಾನ್ಯ ಸಾಗರವಲ್ಲ. ಕಿಂತು ಕರ್ಮಸಾಗರ. ಅಂಭಸ್ ಎಂಬ ಶಬ್ದಕ್ಕೆ ಕರ್ಮ ಎಂಬ ಅರ್ಥವು ಪ್ರಸಿದ್ಧವಾಗಿದೆ. ಅಂಥ ಕರ್ಮಸಾಗರದ ತರಂಗ ಎಂದರೆ ಒಂದೊಂದು ಸುಕರ್ಮ ಎಂದು ಅರ್ಥ. ಆ ತರಂಗದ ಸಂಬಂಧಿಯಾದ ವಾತ ಅಂದರೆ ಸುಕರ್ಮಗಳ ಸೌಗಂಧ್ಯದಿಂದ ಯುಕ್ತವಾದ ಗಾಳಿ, ಅಂದರೆ ಪುಣ್ಯ ಎಂದು ತಾತ್ಪರ್ಯ. ಅಂಥ ಪುಣ್ಯಗಳಿಂದ ಆ ಎಲ್ಲ ದೇವತೆಗಳು ಪರಿಶೋಭಿತರಾಗಿದ್ದಾರೆ. ಹೀಗೆ ತಿಳಿದರೆ ಯಾವ ಬಾಧಕವೂ ಇಲ್ಲ.

ಬ್ರಾಹ್ಮಣನ ಬಲಕಿವಿಯಲ್ಲಿರುವ, ಇಂಥ ಸುಕರ್ಮಗಳಿಂದ ಪರಿಶೋಭಿತರಾದ ದೇವತೆಗಳಲ್ಲಿ ವಾಯುದೇವರು ವಾಸವಾಗಿದ್ದಾರೆ.

**ननु ब्रह्मादीनां पुण्ययुतत्वं सम्भवति । विष्णोः कथं युज्यते इति चेत् तत्रोच्यते । अन्यसज्जनकृतकर्मजन्यपुण्यसमर्पणेन प्रसन्नत्वमेव । तादृशवातेन परिशोभितत्वं विवक्ष्यत इत्यदोषः ।**

ಬ್ರಹ್ಮಾದಿದೇವತೆಗಳು ಪುಣ್ಯದಿಂದ ಪರಿಶೋಭಿತರಾಗಬಹುದು. ಆ ದೇವತೆಗಳ ಗುಂಪಿನಲ್ಲಿ ಭಗವಂತನೂ ಇದ್ದಾನೆ. ಆ ಭಗವಂತನಿಗೆ ಪುಣ್ಯವೇ ಇಲ್ಲ. ಪುಣ್ಯದಿಂದ ಪರಮಾತ್ಮ ಹೇಗೆ ಪರಿಶೋಭಿತನಾದಾನು? ಎಂಬ ಶಂಕೆಯು ಬರುತ್ತದೆ.

ನಿಜ. ಪರಮಾತ್ಮನಿಗೆ ಪುಣ್ಯ ಇಲ್ಲ. ಪುಣ್ಯದಿಂದ ಆತ ಪರಿಶೋಭಿತ ನಾಗಲಾರ. ಆದರೂ ಪುಣ್ಯದಿಂದ ಪರಿಶೋಭಿತನಾಗುವುದೆಂದರೆ ಬ್ರಹ್ಮಾದಿಗಳು ಸಮರ್ಪಿಸಿದ ಪುಣ್ಯದಿಂದ ಪ್ರಸನ್ನನಾಗುವುದು ಎಂದು ಮಾತ್ರ ಅರ್ಥ. ಹೀಗೆ ತಿಳಿದರೆ ಯಾವ ಬಾಧಕವೂ ಇಲ್ಲ.

**अथवा तुङ्गाम्भोधितरङ्गस्य वातेन परिशोभिते–**

**यथायोग्यमुत्कृष्टो यः कर्माख्यजलाशयः तस्य यः एकैककर्मरूपः तरङ्गः तस्य वातेन पुण्याख्येन परिशोभिते चक्रतीर्थस्य गण्डक्याः दक्षिणस्थः यः गिरिः भारतभूमिस्थः पूज्यसात्त्विकजनसमुदायः तत्र प्रेरकतया फलप्रदतया च सदा वासिनम् ।**

ಅಥವಾ ತುಂಗಾಂಭೋಧಿತರಂಗಸ್ಯ ವಾತೇನ ಪರಿಶೋಭಿತೇ ಎಂಬುದಕ್ಕೆ ಹೀಗೆ ಅರ್ಥವನ್ನು ತಿಳಿಯಬಹುದು. ಕರ್ಮರೂಪವಾದ ಜಲಾಶಯವು ಅತ್ಯಂತ ಉತ್ಕೃಷ್ಟವಾಗಿದೆ. ಒಂದೊಂದು ಕರ್ಮವು ಒಂದೊಂದು ತೆರೆಯಂತೆ ಇದೆ. ಪುಣ್ಯವೇ ಆ ತೆರೆಯ ಗಾಳಿಯಾಗಿದೆ. ಅಂಥ ಪುಣ್ಯವಾಯುವಿನಿಂದ ಪರಿಶೋಭಿತವಾದ ದೇಶ ಭಾರತದೇಶ.

ಚಕ್ರತೀರ್ಥ ಅಂದರೆ ಗಂಡಕೀತೀರ್ಥ. ಆ ಗಂಡಕಿಯ **ದಕ್ಷಿಣಸ್ಥ** ಬಲಭಾಗದಲ್ಲಿ ಇರುವ ಪ್ರದೇಶ ಭಾರತ. ಆ ಭಾರತದಲ್ಲಿಯ **ಗಿರಿ** ಎಂದರೆ ಸಜ್ಜನರ ಸಮುದಾಯ. ಅಂಥ ಸಜ್ಜನ ಸಮುದಾಯಕ್ಕೆ ನಿಯಾಮಕರಾಗಿ, ಅವರಿಗೆ ಫಲವನ್ನು ನೀಡುವುದಕ್ಕಾಗಿ ಯಾವಾಗಲೂ ಆ ಭಾರತಭೂಮಿಯಲ್ಲಿ ವಾಸಮಾಡುತ್ತಾರೆ ವಾಯುದೇವರು. ಆದ್ದರಿಂದ ತುಂಗಾಂಭೋಧಿತರಂಗಸ್ಯ ವಾತೇನ ಪರಿಶೋಭಿತೇ ಸದಾ ವಾಸಿನಂ ಎಂದು ವಾಯುದೇವರನ್ನು ಸ್ತುತಿಸುತ್ತಿದ್ದಾರೆ.

**यद्वा तुङ्गाम्भोधितरङ्गस्य उक्तरीत्या सत्कृतैकैकसुकृतस्य विषये दूतं रामस्य । रामाज्ञया सज्जनकृतमेकैकमपि सुकृतं रामाय अर्पयतीति यावत् ।**

ಅಥವಾ, ತುಂಗಾಂಭೋಧಿತರಂಗಸ್ಯ (ವಿಷಯೇ) ರಾಮಸ್ಯ ದೂತಂ ಎಂದು ಅನ್ವಯ ಮಾಡಿಕೊಂಡು ಮತ್ತೊಂದು ವಿಧವಾಗಿ ಅರ್ಥವನ್ನು ತಿಳಿಯಬಹುದು.

ತುಂಗಾಂಭೋಧಿತರಂಗಸ್ಯ (ವಿಷಯೇ) ಎಂದರೆ ಸಜ್ಜನರು ಮಾಡಿದ ಒಂದೊಂದು ಪುಣ್ಯದ ವಿಷಯದಲ್ಲಿ ರಾಮನ ದೂತರಾಗಿದ್ದಾರೆ ವಾಯುದೇವರು. ಅಂದರೆ ರಾಮಚಂದ್ರದೇವರ ಆಜ್ಞೆಯಿಂದ ರಾಮಭಕ್ತರು ಮಾಡಿದ ಪ್ರತಿಯೊಂದು ಪುಣ್ಯಕರ್ಮವನ್ನೂ ರಾಮಚಂದ್ರದೇವರಿಗೆ ಸಮರ್ಪಿಸುತ್ತಾರೆ. ಹೀಗೆ ರಾಮಚಂದ್ರದೇವರಿಗೆ ಸಜ್ಜನರ ಸತ್ಕರ್ಮಗಳನ್ನು ತಲುಪಿಸುತ್ತಾರೆ. ಆದ್ದರಿಂದ ಹನುಮಂತದೇವರು ರಾಮನ ದೂತರಾಗಿದ್ದಾರೆ.

**गिरेः वातेन परिशोभितत्वमेव विशेषणम् । समीचीनेन सौरभयुक्तेन वातेनेति लभ्यते । असाधारण्येन व्यपदेशा भवन्तीत्यनेन न्यायेन ।**

ಹನುಮಂತದೇವರು ವಾಸವಾಗಿರುವ ಪರ್ವತ ತಂಪಾದ ಗಾಳಿಯಿಂದ ಪರಿಶೋಭಿತವಾಗಿದೆ. ಆ ಗಾಳಿ ತಂಪಾಗಿರುವಂತೆ ಸುರಭಿಯೂ ಆಗಿದೆ. ಸುಗಂಧಿಯೂ ಆಗಿದೆ ಎಂದು ತಿಳಿಯಬೇಕು. ಹೀಗೆ ತಂಪಾದ, ಅತ್ಯಂತ ಸುಗಂಧವಾದ ಗಾಳಿಯಿಂದ ಪರಿಶೋಭಿತವಾದ ಪರ್ವತದಲ್ಲಿ ವಾಯುದೇವರು ಸನ್ನಿಹಿತರಾಗಿದ್ದಾರೆ ಎಂಬುದಾಗಿ ತಿಳಿಯಬೇಕು.

### ಸದಾ ವಾತೇನ ಪರಿಶೋಭಿತೇ ಸದಾ ವಾಸಿನಂ

**अथवा वातेन वायुदेवेन परिशोभिते अस्मत्कृतप्रतिष्ठापनात् पूर्वमेव अलङ्कृते गिरौ अस्मत्कृतप्रतिष्ठापनोत्तरं सन्निधानविशेषेण सदा वासिनम् ।**

ಅಥವಾ ಸದಾ ವಾತೇನ ಪರಿಶೋಭಿತೇ ಸದಾ ವಾಸಿನಂ ಎಂದು ಅನ್ವಯ ಮಾಡಿಕೊಂಡು ಹೀಗೂ ಅರ್ಥವನ್ನು ತಿಳಿಯಬಹುದು.

ಹಂಪಿಯ ಪರಿಸರದಲ್ಲಿರುವ ಆ ಪರ್ವತವು ವಾತದಿಂದ ಪರಿಶೋಭಿತವಾಗಿದೆ. ಅಂದರೆ ಶ್ರೀಮದ್ವ್ಯಾಸತೀರ್ಥರು ಹನುಮಂತದೇವರನ್ನು ಪ್ರತಿಷ್ಠಾಪಿಸುವುದಕ್ಕೂ ಮೊದಲೇ ಆ ಪರ್ವತವು ವಾತರೂಪಿಯಾದ ಹನುಮಂತದೇವರಿಂದ ಅಲಂಕೃತವಾಗಿತ್ತು. ವ್ಯಾಸತೀರ್ಥರು ಪ್ರತಿಷ್ಠಾಪನ ಮಾಡಿದ ಮೇಲೆ ಹನುಮಂತದೇವರು ಅಲ್ಲಿ ವಿಶೇಷವಾಗಿ ಸನ್ನಿಹಿತರಾದರು. ಬಂದ ಭಕ್ತರನ್ನು ಅನುಗ್ರಹಿಸುವುದಕ್ಕಾಗಿ ಯಾವಾಗಲೂ ಅಲ್ಲಿ ವಾಸವಾದರು.

**स जडोऽपि गिरिः निरुक्तरीत्या तुङ्गाम्भोधितरङ्गस्य वातेन सज्जनसुकृतवातेन परिशोभितः । ''यथा वृक्षस्य सम्पुष्पितस्य दूराद् गन्धो वात्येवं पुण्यस्य कर्मणो दूराद् गन्धो वाति'' इत्युक्तदिशा परितः वर्तमाना ये सज्जनाः तुङ्गातीरस्थाः तदीयसदाचार-सत्कर्मानुष्ठानादिभिः पाविते गिरौ तत्प्रीत्यै सदा वासिनम् ।**

ಆ ಪರ್ವತವು ಅಚೇತನ. ಆದರೂ ಸಜ್ಜನರು ಮಾಡಿದ ಸುಕೃತವಾತದಿಂದ ಪರಿಶೋಭಿತವಾಗಿದೆ. ಉಪನಿಷತ್ತು ಸುಕೃತಕರ್ಮಗಳ, ಪುಣ್ಯಕರ್ಮಗಳ ವೈಭವವನ್ನು ಹೀಗೆ ಕೊಂಡಾಡುತ್ತದೆ.

''ಯಥಾ ವೃಕ್ಷಸ್ಯ ಸಂಪುಷ್ಪಿತಸ್ಯ ದೂರಾದ್ಗಂಧೋ ವಾತ್ಯೇವಂ ಪುಣ್ಯಸ್ಯ ಕರ್ಮಣೋ ದೂರಾದ್ಗಂಧೋ ವಾತಿ'' ಚೆನ್ನಾಗಿ ಹೂಬಿಟ್ಟ ವೃಕ್ಷ ದೂರದ ತನಕ ತನ್ನ ಕಂಪನ್ನು ಸೂಸುತ್ತದೆ. ತನ್ನ ಸೌಗಂಧ್ಯವನ್ನು ಹರಡಿಸುತ್ತದೆ. ಹಾಗೆಯೇ ಪುಣ್ಯಕರ್ಮದ ಸೌಗಂಧ್ಯ ದೂರದ ತನಕ ಹರಡಿರುತ್ತದೆ. ತುಂಗಾತೀರದಲ್ಲಿ ವಾಸ ಮಾಡುವ ಸಜ್ಜನರ ಸದಾಚಾರ-ಸತ್ಕರ್ಮಾನುಷ್ಠಾನಗಳಿಂದ ಆ ಪರ್ವತವು ಪರಿಶೋಭಿತವಾಗಿದೆ. ಪರಮಪವಿತ್ರವಾಗಿದೆ. ಅಂಥ ಪುಣ್ಯಗಂಧಪರಿಪೂತವಾದ ಪರ್ವತದಲ್ಲಿ ಹನುಮಂತದೇವರು ಪರಮಾತ್ಮನ ಪ್ರೀತಿಗಾಗಿ ವಾಸವಾಗಿದ್ದಾರೆ.

**ನಾನಾದೇಶಾಗತೈಃ ಸದ್ಭಿಃ ನೃಪೋತ್ತಮೈಃ ಸೇವ್ಯಮಾನಂ**

**१) नानादेशागतैः विविधदेशविशेषेभ्यः आगतैः सद्भिः ज्ञानश्रद्धा-भक्तिविरक्त्यादिगुणगणमण्डितैः नृपोत्तमैः राजश्रेष्ठैः धूपदीपादिनैवेद्यैः पञ्चखाद्यैश्च भक्ष्यभोज्यलेह्यपेयचोष्यरूपैः साधनैः भक्तितः सेव्यमानं हेमकान्तिसमप्रभं सुवर्णकान्तिसदृशकान्तियुक्तम् । हनूमन्तं व्रजामि शरणमिति शेषः ।**

**ನಾನಾದೇಶಾಗತೈಃ** ವಿವಿಧ ದೇಶಗಳಿಂದ ಬಂದಿರುವ, **ಸದ್ಭಿಃ** ಜ್ಞಾನ-ಶ್ರದ್ಧಾ-ಭಕ್ತಿ-ವಿರಕ್ತಿ ಮುಂತಾದ ಗುಣಗಳಿಂದ ಅಲಂಕೃತರಾದ **ನೃಪೋತ್ತಮೈಃ** ಶ್ರೇಷ್ಠರಾದ ರಾಜರಿಂದ **ಧೂಪದೀಪಾದಿನೈವೇದ್ಯೈಃ** ಧೂಪ-ದೀಪ-ನೈವೇದ್ಯ ಮುಂತಾದ ಉಪಚಾರಗಳಿಂದ, **ಪಂಚಖಾದ್ಯೈಶ್ಚ** ಭಕ್ಷ್ಯ-ಭೋಜ್ಯ-ಲೇಹ್ಯ-ಪೇಯ-ಚೋಷ್ಯರೂಪವಾದ ಆಹಾರಪದಾರ್ಥಗಳಿಂದ **ಭಕ್ತಿತಃ ಸೇವ್ಯಮಾನಂ** ಭಕ್ತಿಯಿಂದ ಆರಾಧಿತನಾದ **ಹೇಮಕಾಂತಿಸಮಪ್ರಭಂ** ಬಂಗಾರದಂತೆ ಹೊಳೆಯುತ್ತಿರುವ ಕಾಂತಿಯುಳ್ಳ **ಹನುಮಂತಂ** ಹನುಮಂತದೇವರನ್ನು **ವ್ರಜಾಮಿ** ಶರಣು ಹೋಗುತ್ತೇನೆ. ಎಂದು ಅನ್ವಯ ಮಾಡಿಕೊಳ್ಳಬೇಕು.

**२) अथवा नानेति भिन्नं पदं विनार्थे । अन्यैरिति अध्याह्रियते । अपीति शेषः । तथाच देशागतैः दूरदेशागतैः तद्देशवर्तमानैर्वा नृपोत्तमैः नाना विना अन्यैः सद्भिः अपि भक्तितः (सेव्यमानम्) धूपादिभिः साधनैः सेव्यमानम् ।**

ನಾನಾ ಎಂಬುದು ಪ್ರತ್ಯೇಕ ಪದ ಎಂದು ಇಟ್ಟುಕೊಳ್ಳಬೇಕು. **ದೇಶಾಗತೈಃ ನಾನಾ** ದೂರದೇಶದಿಂದ ಬಂದಿರುವ, ಆ ದೇಶದಲ್ಲಿರುವ ರಾಜರಲ್ಲದೇ **ಅನ್ಯೈಃ ಸದ್ಭಿಃ** ಬೇರೇ ಸಜ್ಜನರಿಂದಲೂ **ಧೂಪದೀಪಾದಿನೈವೇದ್ಯೈಃ ಸೇವ್ಯಮಾನಂ** ಭಕ್ತಿಯಿಂದ ಧೂಪಾದಿಸಾಧನಗಳಿಂದ ಆರಾಧಿತರಾದ ಹನುಮಂತದೇವರನ್ನು **ವ್ರಜಾಮಿ** ಶರಣು ಹೋಗುತ್ತೇನೆ.

ಯಂತ್ರೋದ್ಧಾರಕಪ್ರಾಣದೇವರನ್ನು ಆ ದೇಶವಾಸಿಗಳಾದ ರಾಜರು ಸೇವಿಸುತ್ತಾರೆ. ಅಲ್ಲಿಯ ಪ್ರಾಣದೇವರನ್ನು ಸೇವಿಸಲು ದೂರದೇಶದಿಂದಲೂ

ರಾಜರು ಬರುತ್ತಾರೆ. ರಾಜರು ಮಾತ್ರ ಅಲ್ಲ. ಉಳಿದ ಸಜ್ಜನರು ಕೂಡಾ ವಾಯುದೇವರನ್ನು ಸೇವಿಸಲು ದೂರ ದೂರದಿಂದ ಅಲ್ಲಿಗೆ ಬರುತ್ತಾರೆ. ಅಲ್ಲಿಯ ಸಜ್ಜನರು ಕೂಡಾ ಪ್ರಾಣದೇವರನ್ನು ಭಕ್ತಿಯಿಂದ ಸೇವಿಸುತ್ತಾರೆ. ಒಟ್ಟಾರೆ ಎಲ್ಲ ಸಜ್ಜನರೂ ಯಂತ್ರೋದ್ಧಾರಕ ಪ್ರಾಣದೇವರನ್ನು ಸೇವಿಸುತ್ತಾರೆ ಎಂದು ತಾತ್ಪರ್ಯ.

**३) यद्वा– नाना नानात्वं जीवब्रह्मभेदं आदिशन्ति उपदिशन्ति इति नानादेशाः भेदोपदेशकाः ज्ञानिनः तत्प्रेरणाया आगताः तथा, तैः सेव्यमानम् । नानादेशैः आ सम्यग् गतं ज्ञानं येषां ते इति वा । तैः सद्भिः सेव्यमानम् ।**

ಅಥವಾ **ನಾನಾ** ಎಂದರೇ ನಾನಾತ್ವ ಭೇದ ಎಂದು ಅರ್ಥ. ನಾನಾವನ್ನು ನಾನಾತ್ವವನ್ನು ಅಂದರೆ ಜೀವಬ್ರಹ್ಮಭೇದವನ್ನು **ಆದೇಶ** ಮಾಡುವವರು ಉಪದೇಶ ಮಾಡುವವರು ನಾನಾದೇಶರು. ಜೀವಬ್ರಹ್ಮರಲ್ಲಿಯ ಭೇದವನ್ನು ಉಪದೇಶಿಸುವ ಜ್ಞಾನಿಗಳು ಎಂದರ್ಥ. **ನಾನಾದೇಶಾಗತೈಃ ಸದ್ಭಿಃ ಸೇವ್ಯಮಾನಂ** ಅಂಥ ಜ್ಞಾನಿಗಳ ಪ್ರೇರಣೆಯಿಂದ ಬಂದ ಜನರಿಗೆ ಯಂತ್ರೋದ್ಧಾರಕಪ್ರಾಣದೇವರು ಆರಾಧ್ಯರಾಗಿದ್ದಾರೆ.

**४) अनो वायुः न विद्यते प्रेरकतया यस्मिन् सः नानः विष्णुः, तस्य आदेशः ''वायौ मुख्यधिया'' इत्यादिरूपः तस्मात् कारणादागताः इति वा ।**

ಅನ ಎಂದರೆ ಮುಖ್ಯಪ್ರಾಣದೇವರು ಎಂದು ಅರ್ಥ. ನ ಅನ ಎಂದರೆ ಮುಖ್ಯಪ್ರಾಣದೇವರು ಪರಮಾತ್ಮನಿಗೆ ಪ್ರೇರಕರಲ್ಲ. ಆದ್ದರಿಂದ ನಾನ ಎಂದರೆ ವಿಷ್ಣು. ಅಂಥ ನಾನ ಆದ ಪರಮಾತ್ಮನ ''ವಾಯೌ ಮುಖ್ಯಧಿಯಾ...'' ಇತ್ಯಾದಿಯಾದ ಆದೇಶವನ್ನು ತಿಳಿದು ಮುಖ್ಯಪ್ರಾಣನ ಸೇವೆಗಾಗಿ ಬಂದವರು ನಾನಾದೇಶಾಗತರು. ಅಂಥವರಿಂದ ಮುಖ್ಯಪ್ರಾಣದೇವರು ಸೇವಿತರಾಗಿದ್ದಾರೆ ಎಂದು ತಾತ್ಪರ್ಯ.

५) नानादाः नानाफलप्रदा देवाः तेषामीशः रुद्रः, ब्रह्मा, विष्णुर्वा । तस्मात् तदनुग्रहाद् आगता इति वा ।

ಅಥವಾ **ನಾನಾದ ಈಶ ಆಗತ** ಎಂದು ಪದವಿಭಾಗವನ್ನು ಮಾಡಿಕೊಳ್ಳಬೇಕು. ನಾನಾದ ಎಂದರೆ ನಾನಾವಿಧವಾದ ಫಲಗಳನ್ನು ನೀಡುವ ದೇವತೆಗಳು ಎಂದು ಅರ್ಥ. ಹಾಗೆ ನಾನಾದರಾದ ದೇವತೆಗಳಿಗೆ ಈಶರು ನಿಯಾಮಕರಾದವರು ರುದ್ರ-ಬ್ರಹ್ಮ ಮತ್ತು ವಿಷ್ಣು. ಇವರ ಅನುಗ್ರಹದಿಂದ ಆಗತರಾದ ಬಂದಿರುವ ಸಜ್ಜನರಿಂದ ಪ್ರಾಣದೇವರು ಆರಾಧ್ಯರಾಗಿದ್ದಾರೆ ಎಂದು ಅಭಿಪ್ರಾಯ.

### ನೃಪೋತ್ತಮೈಃ ಸೇವ್ಯಮಾನಮ್

नृपाः राजानः चक्रवर्तिनः तेभ्य उत्तमा देवर्षिपितरः तैः । बहुव्रीहिणा मनुष्योत्तमा अपि ग्राह्याः । नरो मनुष्याश्च पाः चक्रवर्तिनश्च नृपाः ते च ते उत्तमश्च, तैः तथाच देवर्षिपितृपनरैः । सेव्यमानत्वं लब्धम् ।

ನೃಪೋತ್ತಮೈಃ ಎಂಬುದಕ್ಕೆ ರಾಜರು ಎಂಬ ಅರ್ಥವನ್ನು ತಿಳಿದಿದ್ದೆವು. ಈಗ ಮತ್ತೊಂದು ಅರ್ಥವನ್ನು ತಿಳಿಯಬೇಕು. ನೃಪ ಎಂದರೆ ರಾಜರು ಚಕ್ರವರ್ತಿಗಳು ಎಂದು ಅರ್ಥ. **ನೃಪೋತ್ತಮ** ಚಕ್ರವರ್ತಿಗಳಿಗಿಂತಲೂ ಉತ್ತಮರಾದವರು ದೇವರ್ಷಿಗಳು ಮತ್ತು ಪಿತೃಗಳು ಮತ್ತು ಚಕ್ರವರ್ತಿಗಳೇ ಉತ್ತಮರಾಗಿ ಉಳ್ಳ ಮನುಷ್ಯೋತ್ತಮರನ್ನೂ ಸ್ವೀಕರಿಸಬೇಕು. ಚಕ್ರವರ್ತಿಗಳಿಗಿಂತಲೂ ಉತ್ತಮರಾದ ದೇವರ್ಷಿಗಳಿಂದಲೂ, ಪಿತೃಗಳಿಂದಲೂ, ಚಕ್ರವರ್ತಿಗಳಿಂದಲೂ, ಮನುಷ್ಯೋತ್ತಮರಿಂದಲೂ ಇಲ್ಲಿಯ ಪ್ರಾಣದೇವರು ಆರಾಧ್ಯರಾಗಿದ್ದಾರೆ ಎಂದು ಅರ್ಥ.

### ಧೂಪದೀಪಾದಿನ್ನೈವೇದ್ಯೈಃ ಸೇವ್ಯಮಾನಮ್

धूपदीपादिभिः सहितैः नैवेद्यैः तद्रूपैः ।

ಧೂಪ-ದೀಪಾದಿಗಳಿಂದ ಸಹಿತವಾದ ನೈವೇದ್ಯಗಳಿಂದ ಇಲ್ಲಿಯ ಪ್ರಾಣದೇವರು ಆರಾಧ್ಯರಾಗಿದ್ದಾರೆ.

## ಪಂಚಖಾದ್ಯೈಶ್ಚ ಸೇವ್ಯಮಾನಮ್

पञ्चखाद्यैः चशब्देन अनुक्तसमुच्चायकेन अन्यैश्च करणैः सेव्यमानम् ।

ಪಂಚಖಾದ್ಯೈಶ್ಚ ಎಂಬಲ್ಲಿಯ ಚಶಬ್ದದಿಂದ ಇಲ್ಲಿ ಹೇಳದೇ ಇರುವ ಯೋಗ್ಯವಾದ ಪೂಜಾಸಾಧನಗಳಿಂದಲೂ ಪ್ರಾಣದೇವರು ಸೇವ್ಯರಾಗಿದ್ದಾರೆ ಎಂದು ತಿಳಿಯಬೇಕು.

## ಧೂಪದೀಪಾದಿನೈವೇದ್ಯೈಃ ಸೇವ್ಯಮಾನಂ

धूत्काराद् दोषाणामरीणां च धूपः, दीप्यमानत्वाद् दीपः, आदित्वात् कारणत्वाज्जगतः आदिः त्रयाणां कर्मधारयः, धूपदीपादिः विष्णुः तदर्पितनैवेद्यैः पञ्चखाद्यैः । हर्यनिवेदितं हरिर्नाहरति ।

ದೋಷಗಳ ವಿರುದ್ಧ, ಶತ್ರುಗಳ ವಿರುದ್ಧ ಧೂತ್ಕರಿಸುತ್ತಾನೆ. ಆರ್ಭಟಿಸುತ್ತಾನೆ. ಆದ್ದರಿಂದ ಭಗವಂತ ಧೂಪನಾಮಕನಾಗಿದ್ದಾನೆ.

ದೀಪ್ಯಮಾನನಾಗಿದ್ದಾನೆ. ಪ್ರಕಾಶಮಾನನಾಗಿದ್ದಾನೆ. ಆದ್ದರಿಂದ ಭಗವಂತ ದೀಪನಾಮಕನಾಗಿದ್ದಾನೆ.

ಸಮಸ್ತಜಗತ್ತಿಗೆ ಆದಿಯಾಗಿದ್ದಾನೆ, ಕಾರಣನಾಗಿದ್ದಾನೆ. ಆದ್ದರಿಂದ ಭಗವಂತ ಆದಿನಾಮಕನಾಗಿದ್ದಾನೆ.

ಹೀಗೆ ಧೂಪದೀಪಾದಿ ಎಂದರೆ ಧೂಪವೂ ಆದ ದೀಪವೂ ಆದ ಆದಿಯೂ ಆದ ಭಗವಂತ ಎಂದು ಅರ್ಥ. ಧೂಪದೀಪಾದಿನೈವೇದ್ಯೈಃ ಸೇವ್ಯಮಾನಂ ಎಂದರೆ ಧೂಪದೀಪಾದಿಯಾದ ಭಗವಂತನ ನೈವೇದ್ಯದಿಂದಲೇ ಪ್ರಾಣದೇವರು ಆರಾಧ್ಯರಾಗಿದ್ದಾರೆ. ವಿಷ್ಣುನೈವೇದ್ಯವಲ್ಲದ ಪದಾರ್ಥಗಳನ್ನು ಪ್ರಾಣದೇವರು ಸರ್ವಥಾ ಸ್ವೀಕರಿಸುವುದಿಲ್ಲ. ಆದ್ದರಿಂದ ಮೊದಲು ಭಗವಂತನಿಗೆ ನೈವೇದ್ಯ ಮಾಡಿ, ನಂತರ ರಮಾದೇವಿಯರಿಗೆ ನೈವೇದ್ಯ ಮಾಡಿ ನಂತರ ವಾಯುದೇವರಿಗೆ ನೈವೇದ್ಯ ಮಾಡಬೇಕು.

**ಪಂಚಖಾದ್ಯೈಶ್ಚ ಸೇವ್ಯಮಾನಮ್**

पञ्च च तानि खानि च पञ्चखानि पञ्चज्ञानेन्द्रियाणि, तेषामद्याः पञ्चखाद्याः शब्दस्पर्शरूपसगन्धाः, तैः वैदिकतान्त्रिकस्तोत्ररूपैः सङ्गीतरूपैश्च शब्दैः चन्दनगतशब्दशीतस्पर्शरूपरसगन्धैः, दीपगत-शब्दरूपोष्णस्पर्शैः, नैवेद्यगतशब्दस्पर्शरूपरसगन्धैः, व्यजनोद्भूत-वायुगतशब्दस्पर्शाभ्यां इत्यादिक्रमेण शब्दादिरूपपञ्चखाद्यैः सह तानर्पयन्निति यावत् । हनूमन्तं व्रजामि । शरणमिति शेषः ।

ಅಥವಾ ಪಂಚ ಖ ಆದ್ಯ ಎಂಬುದಾಗಿ ಪದಗಳನ್ನು ಭೇದ ಮಾಡಿಕೊಳ್ಳಬೇಕು. **ಪಂಚ** ಎಂದರೆ ಐದು ಎಂದು ಅರ್ಥ. **ಖ** ಅಂದರೆ ಇಂದ್ರಿಯಗಳು ಎಂದು ಅರ್ಥ. **ಪಂಚಖ** ಎಂದರೆ ಐದಾದ ಕಿವಿ, ಚರ್ಮ,ಕಣ್ಣು,ನಾಲಿಗೆ,ಮೂಗು ಈ ಐದು ಜ್ಞಾನೇಂದ್ರಿಯಗಳು. ಇವುಗಳಿಗೆ ಅದ್ಯವಾದವುಗಳು ಅಂದರೆ ವಿಷಯವಾದವುಗಳು ಎಂದು ಅರ್ಥ. ಅವುಗಳೇ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳು. ಇವುಗಳಿಂದ ವಾಯುದೇವರು ಆರಾಧ್ಯರಾಗಿದ್ದಾರೆ ಎಂದು ತಿಳಿಯಬೇಕು.

ವೈದಿಕವಾದ, ತಾಂತ್ರಿಕವಾದ, ಸ್ತೋತ್ರರೂಪವಾದ, ಸಂಗೀತರೂಪವಾದ, ಶಬ್ದಗಳಿಂದ ವಾಯುದೇವರು ಸ್ತುತ್ಯರಾಗಿದ್ದಾರೆ ಎಂದು ತಿಳಿಯಬೇಕು.

ಚಂದನದಲ್ಲಿ ಶಬ್ದ, ಶೀತಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ಗುಣಗಳಿವೆ. ಚಂದನವನ್ನು ವಾಯುದೇವರಿಗೆ ಸಮರ್ಪಿಸುವಾಗ ಕೇವಲ ಚಂದನವನ್ನಷ್ಟೇ ಸಮರ್ಪಿಸಬಾರದು. ಚಂದನದಲ್ಲಿರುವ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳನ್ನು ಸಮರ್ಪಿಸಬೇಕು. ಆ ಐದರಿಂದಲೂ ಪಂಚಖಾದ್ಯಗಳಿಂದಲೂ ವಾಯುದೇವರು ಪೂಜ್ಯರಾಗಿದ್ದಾರೆ ಎಂದು ತಿಳಿಯಬೇಕು.

ದೀಪವನ್ನು ಸಮರ್ಪಿಸುವಾಗ ದೀಪದಲ್ಲಿಯ ಶಬ್ದ-ರೂಪ-ಉಷ್ಣಸ್ಪರ್ಶಗಳಿಂದ ವಾಯುದೇವರನ್ನು ಆರಾಧಿಸಬೇಕು.

ನೈವೇದ್ಯವನ್ನು ಸಮರ್ಪಿಸುವಾಗ ಆ ನೈವೇದ್ಯದಲ್ಲಿರುವ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳನ್ನು ಸಮರ್ಪಿಸುತ್ತಾ ವಾಯುದೇವನ್ನು ಪೂಜಿಸಬೇಕು. ಬೀಸಣಿಕೆಯಿಂದ ಗಾಳಿ ಬೀಸುತ್ತಾ, ಆ ಗಾಳಿಯಲ್ಲಿರುವ ಶಬ್ದ-ಸ್ಪರ್ಶಗಳಿಂದ ವಾಯುದೇವರನ್ನು ಪೂಜಿಸಬೇಕು. ಈ ಕ್ರಮದಲ್ಲಿ ಶಬ್ದವೇ ಮುಂತಾದ ಪಂಚಖಾದ್ಯಗಳಿಂದ ಸಹಿತವಾಗಿ ಅಂದರೆ ಆ ಶಬ್ದಾದಿರೂಪವಾದ ಪಂಚಖಾದ್ಯಗಳನ್ನು ವಾಯುದೇವರಿಗೆ ಅರ್ಪಿಸುತ್ತಾ ವಾಯುದೇವರನ್ನು ಪೂಜಿಸುತ್ತಾ ವಾಯುದೇವರನ್ನು ಶರಣು ಹೋಗುತ್ತೇನೆ. ಎಂಬುದಾಗಿ ಅರ್ಥವನ್ನು ತಿಳಿಯಬೇಕು.

## ವ್ಯಾಸತೀರ್ಥಯತೀಂದ್ರೇಣ

**व्यासतीर्थनाम्ना यतीन्द्रेण यतिश्रेष्ठेन । ननु कथं स्वस्य श्रैष्ठ्यं स्वयं वक्ति इति चेन्न । श्रीमदाचार्यटीकाचार्यग्रन्थाध्येतृत्वतद्व्याख्यातृत्व-प्रयुक्तश्रैष्ठ्यस्य विवक्षितस्य तच्छ्रैष्ठ्ये एव पर्यवसानधिया उपपत्तेः ।**

ಯತಿಶ್ರೇಷ್ಠರಾದ ವ್ಯಾಸತೀರ್ಥರಿಂದ ಈ ಪ್ರಾಣದೇವರು ಆರಾಧಿತರಾಗಿದ್ದಾರೆ. ಎಂದು ಅರ್ಥ.

ಶ್ರೀವ್ಯಾಸರಾಜರು ತಮ್ಮನ್ನು ತಾವೇ ಶ್ರೇಷ್ಠ ಎಂದು ಹೇಗೆ ಹೇಳಿಕೊಂಡರು ಎಂದು ತಲೆ ಕೆಡಿಸಿಕೊಳ್ಳುವ ಕಾರಣವಿಲ್ಲ. ಶ್ರೀಮದಾಚಾರ್ಯರ, ಟೀಕಾಚಾರ್ಯರ ಗ್ರಂಥಗಳನ್ನು ಅಧ್ಯಯನಮಾಡಿದ್ದರಿಂದ, ಅವರ ಗ್ರಂಥಗಳನ್ನು ವ್ಯಾಖ್ಯಾನ ಮಾಡಿದ್ದರಿಂದ ಬಂದಿರುವ ಶ್ರೇಷ್ಠತ್ವ ಇದು. ಈ ಶ್ರೇಷ್ಠತ್ವವನ್ನು ಹೇಳಿಕೊಳ್ಳಬಹುದು. ಯಾಕೆಂದರೆ ಈ ವಿಧವಾದ ಪೂಜ್ಯತ್ವವಾಗಲೀ, ಉತ್ತಮತ್ವವಾಗಲೀ ಶ್ರೀಮದಾಚಾರ್ಯರಲ್ಲಿ, ಟೀಕಾಕೃತ್ಪಾದರಲ್ಲಿಯೇ ಪರ್ಯವಸಿತವಾಗುತ್ತದೆ.

ಅಂದರೆ, - ಶ್ರೀಮದಾಚಾರ್ಯರ, ಟೀಕಾಕೃತ್ಪಾದರ ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದರಿಂದ, ಅವರ ಗ್ರಂಥಗಳಿಗೆ ವ್ಯಾಖ್ಯಾನ ಮಾಡಿದ್ದರಿಂದ ನಾನು ಹಿರಿಯ ಎಂದು ಹೇಳಿಕೊಂಡರೆ, ಆ ಹಿರಿತನ ಶ್ರೀಮದಾಚಾರ್ಯರದ್ದು, ಶ್ರೀಟೀಕಾಕೃತ್ಪಾದರದ್ದು ಹೊರತು ನನ್ನದಲ್ಲ ಎಂದು ಹೇಳಿಕೊಂಡಂತೆಯೇ. ಆದ್ದರಿಂದ ತಮ್ಮ ಶ್ರೇಷ್ಠತ್ವನ್ನು ತಾವೇ ಹೇಳಿಕೊಂಡರು ಎಂಬುದಕ್ಕೆ ಅವಕಾಶವಿಲ್ಲ.

**व्यासः तीर्थः गुरुः येषां ते व्यासतीर्थाः मध्वाचार्यजयमुनि-श्रीपादराजब्रह्मण्यतीर्थादयः त एव इन्द्रा नियामका यस्येति वा ।**

ವ್ಯಾಸಃ ತೀರ್ಥಃ ಯೇಷಾಂ ಎಂದು ವಿಗ್ರಹ ಮಾಡಿದಾಗ ವ್ಯಾಸಃ ವೇದವ್ಯಾಸದೇವರು ತೀರ್ಥಃ ಯಾವ ಶ್ರೀಮದಾಚಾರ್ಯರಿಗೆ, ಶ್ರೀಟೀಕಾಕೃತ್ಪಾದರಿಗೆ, ಶ್ರೀಪಾದರಾಜರಿಗೆ, ಶ್ರೀಬ್ರಹ್ಮಣ್ಯತೀರ್ಥರಿಗೆ ಗುರುಗಳಾಗಿರುವರೋ ಅಂಥ ಶ್ರೀಮದಾಚಾರ್ಯರು ಮುಂತಾದವರು ವ್ಯಾಸತೀರ್ಥರು. ಅವರು ಯತಿಗಳೂ ಆಗಿದ್ದಾರೆ. ಅಂಥ ವ್ಯಾಸತೀರ್ಥ ಯತಿಗಳಾದ ಶ್ರೀಮದಾಚಾರ್ಯರು ಮುಂತಾದವರು ಯಾರಿಗೆ ನಿಯಾಮಕರಾಗಿರುವರೋ ಅಂಥ ವ್ಯಾಸರಾಜರು ವ್ಯಾಸತೀರ್ಥಯತೀಂದ್ರರು ಎನಿಸಿಕೊಳ್ಳುತ್ತಾರೆ. ಹೀಗೆ ಅರ್ಥ ಮಾಡಿದಾಗ ತಮಗೆ ಶ್ರೇಷ್ಠತ್ವವನ್ನು ಹೇಳಿಕೊಂಡಂತೆ ಆಗುವುದಿಲ್ಲ.

**व्यासस्य स्वस्य तीर्थं तीर्थत्वं येभ्यस्ते व्यासतीर्थाः यतयः श्रीपादराजाः ब्रह्मण्यतीर्था वा त एव इन्द्रा यस्येति वा ।**

ವ್ಯಾಸಸ್ಯ ತೀರ್ಥಂ ಯೇಭ್ಯಃ ಎಂದು ವಿಗ್ರಹಮಾಡಿಕೊಳ್ಳಬೇಕು. ವ್ಯಾಸಸ್ಯ ಅಂದರೆ ತಮಗೆ ವ್ಯಾಸರಾಜರಿಗೆ ತೀರ್ಥಂ ಎಂದರೆ ತೀರ್ಥತ್ವವು ಗುರುತ್ವವು ಯಾವ ಯತಿಗಳಿಂದ ಬಂದಿದೆಯೋ ಅಂಥ ಶ್ರೀಪಾದರಾಜರು ಮತ್ತು ಬ್ರಹ್ಮಣ್ಯತೀರ್ಥರು ವ್ಯಾಸತೀರ್ಥಯತಿಗಳು. ಅವರು ಯಾವ ವ್ಯಾಸರಾಜರಿಗೆ ಇಂದ್ರರು ನಿಯಾಮಕರು ಆಗಿರುವರೋ ಅಂಥವರು ವ್ಯಾಸರಾಜಯತೀಂದ್ರರು. ಹೀಗೆ ಹೇಳುವುದರಿಂದ ಶ್ರೀಪಾದರಾಜರಿಗೆ, ಬ್ರಹ್ಮಣ್ಯತೀರ್ಥರಿಗೆ ಶ್ರೇಷ್ಠತ್ವವನ್ನು ಹೇಳಿದಂತಾಯಿತೇ ಹೊರತು ತಮಗೆ ಶ್ರೇಷ್ಠತ್ವವನ್ನು ಹೇಳಿಕೊಂಡಂತೆ ಆಗಲಿಲ್ಲ.

## ವ್ಯಾಸತೀರ್ಥರೂ ಯತೀಂದ್ರರೇ

ವ್ಯಾಸತೀರ್ಥರು ಶ್ರೇಷ್ಠರಲ್ಲವೆಂದಲ್ಲ. ಅವರ ಸ್ಮರಣೆ ನಮಗೆ ತಾರಕವಾಗಿದೆ. ನಮಗೆಲ್ಲರಿಗೂ ಅವರು ಪರಮಶ್ರೇಷ್ಠರಾಗಿದ್ದಾರೆ. ಸಂದೇಹವೇ ಇಲ್ಲ.

**ವಿಧಾನತಃ ಪೂಜಿತಂ ಶರಣಂ ಯಾಮಿ**

**विधानतः तन्त्रशास्त्रोक्तमार्गेण पूजितं हनूमन्तं शरणं व्रजामि ।**

ವಿಧಾನತಃ ಪೂಜಿತಂ ಶರಣಂ ಯಾಮಿ ಎಂದು ಅನ್ವಯ ಮಾಡಿಕೊಂಡು ಹೀಗೆ ಅರ್ಥವನ್ನು ತಿಳಿಯಬೇಕು. **ವಿಧಾನತಃ** ಎಂದರೆ ತಂತ್ರಶಾಸ್ತ್ರೋಕ್ತ ಮಾರ್ಗದಿಂದ ಪೂಜಿತನಾದ ಹನುಮಂತದೇವರನ್ನು ಶರಣು ಹೋಗುತ್ತೇನೆ ಎಂದು ಅರ್ಥ.

**व्यासः तीर्थः गुरुः यस्य व्यासतीर्थः स चासौ यतीन्द्रश्च व्यासतीर्थयतीन्द्रः श्रीमध्वाचार्यः, तेन पूजितं च हनूमन्तं हनूमच्छब्दवाच्यं हनूमदन्तर्गतं हनूमन्नामकं रामं च शरणं यामि न केवलं अधिष्ठानभूतं हनूमन्तम् ।**

ಅಥವಾ ವ್ಯಾಸತೀರ್ಥಯತೀಂದ್ರೇಣ ಪೂಜಿತಂ ಹನುಮಂತಂ ಶರಣಂ ವ್ರಜಾಮಿ ಎಂದು ಅನ್ವಯ ಮಾಡಿಕೊಳ್ಳಬೇಕು. ಅರ್ಥವನ್ನು ಹೀಗೆ ತಿಳಿಯಬೇಕು.

ವ್ಯಾಸಃ ತೀರ್ಥಃ ಯಸ್ಯ ಎಂದು ವಿಗ್ರಹಮಾಡಿಕೊಳ್ಳಬೇಕು. ವೇದವ್ಯಾಸ ದೇವರು ಯಾರಿಗೆ ಗುರುಗಳಾಗಿರುವರೋ ಅಂಥ ವ್ಯಾಸತೀರ್ಥರೆಂದರೇ ಶ್ರೀಮದಾಚಾರ್ಯರು ಎಂದು ಅರ್ಥ. ಅವರು ಯತಿಗಳಲ್ಲಿ ಶ್ರೇಷ್ಠರಾಗಿದ್ದಾರೆ. ಆದ್ದರಿಂದ ವ್ಯಾಸತೀರ್ಥಯತೀಂದ್ರರೆನಿಸುತ್ತಾರೆ. ಅಂಥ ಶ್ರೀಮದಾಚಾರ್ಯ-ರಿಂದ ಪೂಜಿತನಾದ ಹನುಮದಂತರ್ಯಾಮಿಯಾದ, ಹನುಮಂತ ಎಂಬ ಶಬ್ದದಿಂದ ಮುಖ್ಯವಾಗಿ ವಾಚ್ಯನಾದ ಶ್ರೀರಾಮಚಂದ್ರ ದೇವರನ್ನು ಶರಣು ಹೋಗುತ್ತೇನೆ ಎಂದು ಅರ್ಥವನ್ನು ತಿಳಿಯಬೇಕು. ಕೇವಲ ಅಧಿಷ್ಠಾನರಾದ ಹನುಮಂತನನ್ನಷ್ಟೇ ಅಲ್ಲ. ಅಂತರ್ಯಾಮಿಯಾದ ರಾಮನನ್ನು ಕೂಡಾ ಶರಣು ಹೋಗುತ್ತೇನೆ ಎಂದು ತಿಳಿಯುವುದು ಆವಶ್ಯಕ. ಆದ್ದರಿಂದ ಹೀಗೆ ಅರ್ಥ ತಿಳಿಯಬೇಕು.

**ವಿಧಾನತಃ**

**१) विधया शास्त्रोक्तप्रकारेण आनतः नतमस्तकः सन् व्रजामि इति वा ।**

ವಿಧಯಾ ಆನತಃ ವಿಧಾನತಃ ಎಂದು ವಿಗ್ರಹ ಮಾಡಿಕೊಳ್ಳಬೇಕು. **ವಿಧಯಾ** ಶಾಸ್ತ್ರೋಕ್ತಪ್ರಕಾರದಿಂದ **ಆನತಃ** ನತಮಸ್ತಕನಾಗಿ ಹನುಮಂತದೇವರನ್ನು, ನಿಯಾಮಕರಾದ ರಾಮಚಂದ್ರದೇವರನ್ನು ಶರಣು ಹೋಗುತ್ತೇನೆ ಎಂದು ಅರ್ಥ ತಿಳಿಯಬೇಕು.

**२) वेः गरुडस्य हनूमत्पूजाधिकारिमुख्यपुरुषस्य धानतः सन्निधानतः । उपसर्गाणां द्योतकत्वात् । वीनां विशिष्टानां भारत्यादिसर्वदेवानां धानतः सन्निधानतो वा । तेषां सन्निधानबलादेव वायुभक्तिः वायुपूजासक्तिः वायुपूजाशक्तिः भवतीति भावः ।**

ವೇಃ ಧಾನತಃ ಎಂದೂ ವಿಗ್ರಹ ಮಾಡಿಕೊಳ್ಳಬಹುದು. ಅರ್ಥ ಹೀಗೆ ತಿಳಿಯಬೇಕು.

ವೇಃ ಹನುಮಂತದೇವರ ಪೂಜೆಗೆ ಮುಖ್ಯ ಅಧಿಕಾರಿಗಳಾದ ಗರುಡದೇವರ ಸನ್ನಿಧಾನದ ಬಲದಿಂದ ವಾಯುದೇವರನ್ನು ನಾನು ಪೂಜಿಸುತ್ತೇನೆ. ಅವರಿಗೆ ಶರಣಾಗತನಾಗುತ್ತೇನೆ ಎಂದು ಅರ್ಥ.

ಅಥವಾ ವೀನಾಂ ಧಾನತಃ ಎಂದೂ ವಿಗ್ರಹ ಮಾಡಿಕೊಳ್ಳಬಹುದು. **ವಿ** ಎಂದರೆ ವಿಶಿಷ್ಟರಾದವರು ಎಂದು ಅರ್ಥ. ವಿಶಿಷ್ಟರಾದವರು ಭಾರತೀ ಮುಂತಾದ ಎಲ್ಲ ದೇವತೆಗಳು. **ಧಾನತಃ** ಆ ಎಲ್ಲ ದೇವತೆಗಳ ಸನ್ನಿಧಾನ ಬಲದಿಂದ ವಾಯುದೇವರ ಪೂಜೆಯನ್ನು ನಾನು ಮಾಡುತ್ತೇನೆ ಎಂದು ವ್ಯಾಸತೀರ್ಥರು ಹೇಳುತ್ತಿದ್ದಾರೆ ಎಂದು ತಿಳಿಯಬೇಕು. ಆ ದೇವತೆಗಳ ಸನ್ನಿಧಾನವು ಬಲವಾಗಿ ಇದ್ದಾಗಲೇ ವಾಯುದೇವರನ್ನು ಪೂಜಿಸುವ ಶಕ್ತಿ, ಆಸಕ್ತಿ, ವಾಯುದೇವರಲ್ಲಿ ಭಕ್ತಿಯು ಬರುತ್ತದೆ. ಇಲ್ಲದಿದ್ದರೆ ಸರ್ವಥಾ ಇಲ್ಲ. ಆದ್ದರಿಂದ ಆ ದೇವತೆಗಳ ಸನ್ನಿಧಾನ ನಮ್ಮಲ್ಲಿ ಬಲವಾಗುವಂತೆ ನಾವು ಇರಬೇಕು.

**३) विं परमात्मानं रामं धरति स्वस्कन्धे इति विधः हनूमान् । स चासौ अनश्च मुख्यप्राणश्च विधानः । तस्मात् तत्प्रेरणयेति यावत्, इति वा । तत्पूजार्थं तत्प्रेरणैव साधनमिति भावः । 'धृ'धातोः 'ड' प्रत्ययः । ''विः पक्षिपरमात्मनोः'' इति च । विना गरुडेन ध्रियते**

**इति विधः स चासौ अनश्च विधानः गरुडवाहनः सर्वचेष्टकः रामचन्द्रः तस्मात् तत्प्रेरणयेति वा । स्वभक्तोत्तमं पूजयितुं स एव प्रेरयति हि ।**

ಅಥವಾ ವಿಂ ಧರತೀತಿ ವಿಧಃ ವಿಧಶ್ಚ ಅಸೌ ಅನಶ್ಚ ವಿಧಾನಃ ತಸ್ಮಾತ್ ವಿಧಾನತಃ ಎಂದು ವಿಗ್ರಹ ಮಾಡಿಕೊಳ್ಳಬೇಕು. **ವಿಂ** ಪರಮಾತ್ಮನನ್ನು **ಧರತಿ** ತಮ್ಮ ಹೆಗಲ ಮೇಲೆ ಧರಿಸಿದವರು **ವಿಧರು. ಅನಃ** ಅವರು ಅನರು. ಮುಖ್ಯಪ್ರಾಣದೇವರು. ಆದ್ದರಿಂದ ವಾಯುದೇವರು ವಿಧಾನರು. ವಿಧಾನತಃ ಎಂದರೆ ಹನುಮಂತದೇವರ ಪ್ರೇರಣೆಯಿಂದ ವಾಯುದೇವರನ್ನು ಪೂಜಿಸುತ್ತೇನೆ ಎಂದು ಅರ್ಥ. ಅವರ ಪೂಜೆಗೆ ಅವರ ಪ್ರೇರಣಯೇ ಸಾಧನ ಎಂದು ತಿಳಿಯಬೇಕು.

ಅಥವಾ ವಿ ಎಂದರೆ ಗರುಡ ಎಂದು ಅರ್ಥ. ಆ ಗರುಡನಿಂದ ಧರಿಸಲ್ಪಟ್ಟವನು ಪರಮಾತ್ಮ. ಅವನು ಅನ ಸರ್ವಚೇಷ್ಟಕನಾಗಿದ್ದಾನೆ. ಆದ್ದರಿಂದ ವಿಧಾನ ಎಂದರೆ ಪರಮಾತ್ಮ. ವಿಧಾನತಃ ಎಂದರೆ ಆ ಪರಮಾತ್ಮನ ಪ್ರೇರಣೆಯಿಂದ ಎಂದು ಅರ್ಥ. ತನ್ನ ಭಕ್ತರಲ್ಲಿ ಉತ್ತಮರಾದ ಮುಖ್ಯಪ್ರಾಣದೇವರನ್ನು ಪೂಜಿಸಲು ಆ ಪರಮಾತ್ಮನೇ ಪ್ರೇರಿಸುತ್ತಾನೆ. ಆದ್ದರಿಂದ ಭಗವಂತನ ಪ್ರೇರಣೆ ಪ್ರಾಣದೇವರ ಪೂಜೆಗೆ ಸಾಧನವಾಗಿದೆ.

### ಚವಿಧಾನತಃ

**१) चस्य गुणसमुचयरूपस्य भगवतो विधानतः आज्ञयेति वा ।**

ಅಥವಾ ಚವಿಧಾನತಃ ಎಂಬುದು ಒಂದೇ ಪದ ಎಂದು ಇಟ್ಟುಕೊಳ್ಳಬೇಕು. ಚ ಎಂದರೆ ಗುಣಸಮುಚ್ಚಯರೂಪನಾದ ಪರಮಾತ್ಮ ಎಂದು ಅರ್ಥ. ಅಂಥ ಚನಾಮಕನಾದ ಪರಮಾತ್ಮನ ವಿಧಾನದಿಂದ ಆಜ್ಞೆಯಿಂದ ಪ್ರಾಣದೇವರನ್ನು ಪೂಜಿಸುತ್ತೇನೆ ಎಂಬುದಾಗಿ ಅರ್ಥವನ್ನು ತಿಳಿಯಬೇಕು.

**२) चं गुणसमुचयरूपं भगवन्तं वान्ति जानन्ति इति चवयः भगवद्गुणोत्कर्षज्ञानिनः तेषां धानं निधानं स्थापनं तस्मात् । पूजार्थं ज्ञानिनः व्यवस्थाप्येति यावत् । ल्यब्लोपनिमित्ता पञ्चमी ।**

ಚಂ ವಾಂತಿ ಇತಿ ಚವಯಃ ಚವೀನಾಂ ಧಾನಂ ಚವಿಧಾನಂ ತಸ್ಮಾತ್ ಚವಿಧಾನತಃ ಎಂದು ವಿಗ್ರಹ ಮಾಡಿಕೊಳ್ಳಬೇಕು. **ಚ** ಗುಣೋಚ್ಚಯರೂಪನಾದ ಪರಮಾತ್ಮನನ್ನು **ವ** (ವಾಂತಿ) ತಿಳಿದವರು ಎಂದು ಅರ್ಥ. ಭಗವಂತನ ಗುಣೋತ್ಕರ್ಷವನ್ನು ತಿಳಿದ ಜ್ಞಾನಿಗಳು ಚವಿಗಳು. **ಧಾನ** ಎಂದರೆ ನಿಧಾನ ಅಂದರೆ ಸ್ಥಾಪನ ಎಂದು ಅರ್ಥ. **ಚವಿಧಾನತಃ** ಎಂದರೆ ಗುಣೋಚ್ಚಯರೂಪನಾದ ಪರಮಾತ್ಮನನ್ನು ತಿಳಿದ ಜ್ಞಾನಿಗಳನ್ನು ಪೂಜೆಗಾಗಿ ನಿಯಮಿಸಿ, ಹನುಮಂತದೇವರನ್ನು ಶರಣು ಹೋಗುತ್ತೇನೆ ಎಂದು ಅರ್ಥವನ್ನು ತಿಳಿಯಬೇಕು.

**३) चवयः ज्ञानिनः तेषां धानं सन्निधानं तस्मात् सन्निधानमनुसृत्य । सन्निधाने सतीति यावत् । तेषु पारयणादिकं विदधत्सु सत्सु इति भावः ।**

ಹಿಂದೆ ತಿಳಿದಂತೆ ಚವಿಗಳು ಎಂದರೆ ಭಗವಂತನ ಗುಣೋತ್ಕರ್ಷವನ್ನು ತಿಳಿದ ಜ್ಞಾನಿಗಳು. ಅವರ ಧಾನ ಎಂದರೆ ಸನ್ನಿಧಾನ ಎಂದು ಅರ್ಥ. ಅಂದರೆ ಅವರ ಸನ್ನಿಧಾನ ಇರುವಾಗ ಅಂದರೆ ಅವರು ಪಾರಾಯಣಾದಿಗಳನ್ನು ಮಾಡುತ್ತಿರುವಾಗ ಹನುಮಂತದೇವರನ್ನು ಶರಣು ಹೋಗುತ್ತೇನೆ. ಅಥವಾ ಪೂಜಿಸುತ್ತೇನೆ ಎಂಬುದಾಗಿ ತಿಳಿಯಬೇಕು.

**ತ್ರಿವಾರಂ ಯಃ ಪಠೇನ್ನಿತ್ಯಂ ಸ್ತೋತ್ರಂ ಭಕ್ತ್ಯಾ ದ್ವಿಜೋತ್ತಮಃ**

**यः देवपूजासत्समागमदानादिसत्कर्मकर्ता यः पुरुषः । इत्यौणादिक ''अदि''प्रत्ययान्तयजिधातुनिष्पन्नः खल्वयं यच्छब्दः । यजिश्च देवपूजासङ्गतिकरणदानेषु प्रसिद्धः । उपलक्षणत्वाच्चार्थ-कथनस्यान्येऽपि योग्या अर्था ग्राह्याः । रूढ्याप्यर्थो ग्राह्यः ।**

**ಯಃ** ಯಾರೆಲ್ಲ ಈ ಸ್ತೋತ್ರವನ್ನು ಮೂರು ಬಾರಿ ಪಠಿಸುತ್ತಾರೋ ಅವರೆಲ್ಲರೂ ಸಿದ್ಧಿ ಪಡೆಯುತ್ತಾರೆ ಎಂದಿಷ್ಟೇ ಅರ್ಥವಲ್ಲ. ಯಃ ಎಂಬ ಶಬ್ದವು ಯಜಿ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ದೇವಪೂಜಾಸಂಗತಿಕರಣ-ದಾನೇಷು ಎಂದು ಧಾತುಕೋಶವು ಯಜಿಧಾತುವಿಗೆ ಅರ್ಥ ಹೇಳಿದೆ. ಆದ್ದರಿಂದ **ಯಃ** ಎಂಬ ಶಬ್ದಕ್ಕೆ ದೇವಪೂಜಾ, ಸಜ್ಜನಸಮಾಗಮ, ದಾನ ಮುಂತಾದ

ಸತ್ಕರ್ಮಗಳನ್ನು ಮಾಡುವವರು ಎಂದು ಅರ್ಥ. ಇಂಥ ಸತ್ಕರ್ಮಾನುಷ್ಠಾನ-ಪರನಾದವನು ಈ ಸ್ತೋತ್ರವನ್ನು ಮೂರು ಬಾರಿ ಪಠಿಸಿದರೆ ಸರ್ವವಿಧವಾದ ಸಿದ್ಧಿಯನ್ನು ಪಡೆಯುತ್ತಾನೆ ಎಂದು ಅರ್ಥ.

## ತ್ರಿವಾರಮ್

**१) त्रिभिः विष्णुलक्ष्मीवायुभिः व्रियते प्रतिपादकतासम्बन्धेनेति त्रिवारम् । वृञ् धातोः ''अकर्तरि च'' इति कर्मणि घञि रूपम् ।**

ತ್ರಿವಾರಂ ಎಂಬುದು ಸ್ತೋತ್ರಂ ಎಂಬುದಕ್ಕೆ ವಿಶೇಷಣ ಎಂದು ತಿಳಿಯಬಹುದು. ಈ ಯಂತ್ರೋದ್ಧಾರಕಸ್ತೋತ್ರವು ತ್ರಿವಾರವಾಗಿದೆ ಎಂದು ಅರ್ಥ. ತ್ರಿಭಿಃ ವ್ರಿಯತೇ ಇತಿ ತ್ರಿವಾರಂ ಎಂದು ವಿಗ್ರಹಕ್ಕೆ ಅನುಗುಣವಾಗಿ ಹೀಗೆ ಅರ್ಥಗಳನ್ನು ತಿಳಿಯಬೇಕು. ತ್ರಿಭಿಃ ಎಂದರೆ ವಿಷ್ಣು-ಲಕ್ಷ್ಮೀ-ವಾಯುಗಳಿಂದ ವ್ರಿಯತೇ ವರಿಸಲ್ಪಟ್ಟಿದೆ. ಅಂದರೆ ವಿಷ್ಣು-ವಾಯು-ಲಕ್ಷ್ಮೀದೇವಿಯರು ಈ ಸ್ತೋತ್ರದಿಂದ ಪ್ರತಿಪಾದ್ಯರಾಗಿದ್ದಾರೆ. ಈ ಸ್ತೋತ್ರವು ಈ ಮೂರು ದೇವತೆಗಳನ್ನು ಪ್ರತಿಪಾದಿಸುತ್ತದೆ. ಆದ್ದರಿಂದ ತ್ರಿವಾರ ಎನಿಸಿದೆ. ಅಧಮರಾದ ದೇವತೆಗಳ ಸ್ತೋತ್ರಗಳಿಂದ ಉತ್ತಮರೂ ಪ್ರತಿಪಾದ್ಯರಾಗಿದ್ದಾರೆ. ಈ ವಿಷಯವು ''ಪೂರ್ವಪ್ರಸಿದ್ಧವರ್ಜಂ ತು ಶಕ್ರಾದ್ಯಾ ದೇವತಾ ಮತಾಃ'' ಎಂಬ ವಚನದಿಂದ ಸಿದ್ಧವಾಗಿದೆ.

ಈ ಸ್ತೋತ್ರದಿಂದ ರಮಾದೇವಿಯೂ ಪ್ರತಿಪಾದ್ಯಳಾಗಿದ್ದಾಳೆ. ಭಗವಂತನೂ ಪ್ರತಿಪಾದ್ಯನಾಗಿದ್ದಾನೆ. ಎಂದು ಚಿಂತಿಸಬೇಕು. ಹೀಗೆ ಅನುಸಂಧಾನ ಮಾಡುತ್ತಾ ಈ ಸ್ತೋತ್ರವನ್ನು ಪಠಿಸಬೇಕು. ಅವರು ಯಥೋಕ್ತವಾದ ಫಲಗಳನ್ನು ಪಡೆಯುತ್ತಾರೆ.

**२) त्रिभिः ज्ञानभक्तिवैराग्यैः व्रियते स्वपूर्वकत्वेन स्वीक्रियत इति वा त्रिवारम् । अत्रार्थे भक्त्येत्यस्य द्विजोत्तम इत्यनेनान्वयः ।**

ಅಥವಾ, ಈ ಸ್ತೋತ್ರವು ಮೂರರಿಂದ ಜ್ಞಾನ-ಭಕ್ತಿ-ವೈರಾಗ್ಯಗಳಿಂದ ಯುಕ್ತವಾಗಿದೆ. ಅಂದರೆ, ಜ್ಞಾನ-ಭಕ್ತಿ-ವೈರಾಗ್ಯಗಳಿಂದ ಯುಕ್ತನಾಗಿ ಈ

ಸ್ತೋತ್ರವನ್ನು ಪಠಿಸಿದ ದ್ವಿಜೋತ್ತಮನು ಯಥೋಕ್ತವಾದ ಫಲಗಳನ್ನು ಪಡೆಯುತ್ತಾನೆ ಎಂದು ತಾತ್ಪರ್ಯ.

**३) मानसार्थानुसन्धानवाचिकोच्चारणदैहिकनमस्कारप्रदक्षिणादिभिः त्रिभिः व्रियते स्वसमानकालिकत्वेनेति वा त्रिवारम् ।**

೧. ಮಾನಸಾರ್ಥಾನುಸಂಧಾನ, ೨. ವಾಚಿಕವಾದ ಉಚ್ಚಾರಣ, ೩. ದೈಹಿಕವಾದ ಪ್ರದಕ್ಷಿಣ-ನಮಸ್ಕಾರ, ಈ ಮೂರರಿಂದ ಈ ಸ್ತೋತ್ರವು ಯುಕ್ತವಾಗಿದೆ. ಅಂದರೆ ಏಕಕಾಲದಲ್ಲಿ ಮೂರು ಕಾರ್ಯಗಳು ಆಗುತ್ತಿರಬೇಕು. ಬಾಯಿಯಿಂದ ಈ ಸ್ತೋತ್ರವನ್ನು ಹೇಳುತ್ತಿರಬೇಕು. ಹೇಳುವಾಗಲೇ ಅರ್ಥಾನುಸಂಧಾನವನ್ನು ಮಾಡುತ್ತಿರಬೇಕು. ಆ ಪ್ರಸಂಗದಲ್ಲಿಯೇ ದೈಹಿಕವಾಗಿ ಪ್ರದಕ್ಷಿಣೆ-ನಮಸ್ಕಾರಗಳನ್ನು ಹಾಕುತ್ತಿರಬೇಕು. ಹೀಗೆ ಏಕಕಾಲದಲ್ಲಿ ಈ ಮೂರನ್ನೂ ಅನುಷ್ಠಾನ ಮಾಡಿದ ಭಕ್ತರು ಯಥೋಕ್ತವಾದ ಫಲಗಳನ್ನು ಪಡೆಯುತ್ತಾರೆ ಎಂದು ಅಭಿಪ್ರಾಯ.

**४) विष्णुसर्वोत्तमत्वज्ञानविष्णुप्रेरकत्वानुसन्धानविष्णु-प्रीत्युद्देश्यकत्वैः त्रिभिर्व्रियत इति वा ।**

ವಿಷ್ಣುಸರ್ವೋತ್ತಮತ್ವ-ವಿಷ್ಣುಪ್ರೇರಕತ್ವ-ವಿಷ್ಣುಪ್ರೀತ್ಯುದ್ದೇಶ್ಯತ್ವ ಈ ಮೂರರಿಂದಲೂ ಈ ಸ್ತೋತ್ರವು ಯುಕ್ತವಾಗಿದೆ.

೧) ಭಗವಂತ ಸರ್ವೋತ್ತಮ ಎಂಬ ಭಾವನೆ ಬಲವಾಗಿ ಇರಬೇಕು. ೨. ವಿಷ್ಣುವಿನಿಂದಲೇ ಪ್ರೇರಿತನಾಗಿ ಈ ಸ್ತೋತ್ರವನ್ನು ಪಠಿಸುತ್ತಿದ್ದೇನೆ ಎಂಬ ಚಿಂತನೆ ಇರಬೇಕು. ೩. ಈ ಸ್ತೋತ್ರದ ಪಾರಾಯಣಕ್ಕೆ ವಿಷ್ಣುವೇ ಉದ್ದೇಶ ಎಂದು ಗಟ್ಟಿಯಾದ ನಂಬಿಕೆ ಇರಬೇಕು. ಈ ಮೂರು ಭಾವನೆಗಳಿಂದ ಸಂಪನ್ನರಾದವರಿಗೆ ಮಾತ್ರ ಯಥೋಕ್ತವಾದ ಫಲಗಳು ದೊರೆಯುತ್ತವೆ.

**५) वायुजीवोत्तमत्वज्ञानवायुप्रेरकत्वानुसन्धानवायुप्रीत्योद्देश्यकत्वैः त्रिभिर्व्रियत इति वा ।**

೧. ವಾಯುಜೀವೋತ್ತಮತ್ವಜ್ಞಾನ, ೨. ವಾಯುಪ್ರೇರಕತ್ವಾನುಸಂಧಾನ, ೩. ವಾಯುಪ್ರೀತ್ಯುದ್ದೇಶ್ಯಕತ್ವ ಈ ಮೂರರಿಂದಲೂ ಈ ಸ್ತೋತ್ರವು ಯುಕ್ತವಾಗಿದೆ.

ಈ ಸ್ತೋತ್ರವನ್ನು ಪಠಿಸುವಾಗ ವಾಯುದೇವರು ಜೀವೋತ್ತಮರು ಎಂದು ದೃಢವಾಗಿ ತಿಳಿದಿರಬೇಕು. ವಾಯುದೇವರು ಈ ಕರ್ಮಕ್ಕೆ ಪ್ರೇರಕರು ಎಂಬ ಅನುಸಂಧಾನ ಇರಬೇಕು. ವಾಯುದೇವರು ಪ್ರೀತರಾಗಬೇಕೆಂಬ ಉದ್ದೇಶದಿಂದ ಈ ಸ್ತೋತ್ರದ ಪಾರಾಯಣ ಮಾಡಬೇಕು. ಅಂಥವರಿಗೆ ಮಾತ್ರ ಈ ಸ್ತೋತ್ರವು ಯಥೋಕ್ತವಾದ ಫಲವನ್ನು ನೀಡುತ್ತದೆ.

**६) व्यासराजरूपर्षिहनूमद्रूपदेवतानुष्टुब्रूप्छन्दोज्ञानैस्त्रिभिर्व्रियत इति वा ।**

ಈ ಸ್ತುತಿಯು ಋಷಿ-ದೇವತೆ-ಛಂದಸ್ಸು ಈ ಮೂರರಿಂದಲೂ ಯುಕ್ತವಾಗಿದೆ. ಈ ಸ್ತೋತ್ರಕ್ಕೆ ವ್ಯಾಸರಾಜರು ಋಷಿಗಳಾಗಿದ್ದಾರೆ. ಹನುಮಂತದೇವರು ಪ್ರತಿಪಾದ್ಯ ದೇವತೆಯಾಗಿದ್ದಾರೆ. ಅನುಷ್ಟುಪ್ ಈ ಸ್ತುತಿಯ ಛಂದಸ್ಸಾಗಿದೆ. ಈ ಮೂರನ್ನು ತಿಳಿದು ಈ ಸ್ತುತಿಯನ್ನು ಪಠಿಸಿದವರು ಫಲವನ್ನು ಪಡೆಯುತ್ತಾರೆ.

**७) बळित्थासूक्तसुन्दरकाण्डनिर्णयवायुस्तुतिरूपैः त्रिभिः स्वपूर्वत्वेन, व्रियत इति वा । पुरश्चरणवेलायां तत्पुरःसरमेव पठनसम्प्रदायात् ।**

ಬಳಿತ್ಥಾಸೂಕ್ತ-ಸುಂದರಕಾಂಡ-ವಾಯುಸ್ತುತಿ ಈ ಮೂರು ಸ್ತೋತ್ರ-ಗಳಿಂದಲೂ ಈ ಸ್ತೋತ್ರವು ಯುಕ್ತವಾಗಿದೆ.ಆದ್ದರಿಂದ ಈ ಸ್ತುತಿಯು ತ್ರಿವಾರವಾಗಿದೆ.

ಯಂತ್ರೋದ್ಧಾರಕಸ್ತೋತ್ರವನ್ನು ಪಠಿಸುವುದಕ್ಕೂ ಮುನ್ನ ಬಳಿತ್ಥಾಸೂಕ್ತವನ್ನು, ಸುಂದರಕಾಂಡವನ್ನು, ವಾಯುಸ್ತುತಿಯನ್ನು ಪಾರಾಯಣ ಮಾಡಬೇಕು. ನಂತರ ಈ ಸ್ತೋತ್ರವನ್ನು ಪಠಿಸಬೇಕು. ಆದ್ದರಿಂದ ಈ ಸ್ತೋತ್ರವು ತ್ರಿವಾರ ಎನಿಸುತ್ತದೆ. ಹೀಗೆಯೇ ವಾಯುಸ್ತುತಿ ಪುರಶ್ಚರಣಕಾಲದಲ್ಲಿ ಪಾರಾಯಣ ಮಾಡುವ ಸಂಪ್ರದಾಯವು ಇದೆ.

## ದ್ವಿಜೋತ್ತಮನು ಪಠಿಸಬೇಕು

**१) द्विजोत्तमः ब्राह्मणोत्तमः ।**

ಮತ್ತು ದ್ವಿಜೋತ್ತಮನು ಈ ಸ್ತೋತ್ರವನ್ನು ಪಠಿಸಬೇಕು. ಆವಾಗಲೇ ಯಥೋಕ್ತವಾದ ಫಲವು ಲಭ್ಯವಾಗುತ್ತದೆ. ಪ್ರತಿನಿತ್ಯವೂ ಮೂರು ಹೊತ್ತು ಸಂಧ್ಯಾವಂದನ, ಗಾಯತ್ರೀಜಪ ಇತ್ಯಾದಿ ಕರ್ತವ್ಯಕರ್ಮಗಳನ್ನು ಮಾಡುತ್ತಾ ಬ್ರಾಹ್ಮಣ್ಯವನ್ನು ಪರಿಪಾಲಿಸಿಕೊಂಡು ಇರುವವನು ಈ ಸ್ತೋತ್ರವನ್ನು ಪಾರಾಯಣ ಮಾಡುವುದರಿಂದ ಯಥೋಕ್ತವಾದ ಫಲವು ಲಭ್ಯವಾಗುತ್ತದೆ ಎಂದು ಅಭಿಪ್ರಾಯ.

**२) द्विजाः दन्ता उत्तमा यस्य स तथा । दन्तसौष्ठवाभावे सम्यगुच्चारणभावात् । अदन्तैर्वृद्धैर्न वक्तव्यमिति न । वर्णव्यत्यासो यथा न स्यात् तथा अवधानेन वक्तव्यम् । मनसा वा पठनीयम् ।**

ಅಥವಾ, ದ್ವಿಜ ಎಂದರೆ ಹಲ್ಲುಗಳು. ಯಾರ ಹಲ್ಲುಗಳು ಉತ್ತಮವಾಗಿವೆಯೋ ಅವನು ದ್ವಿಜೋತ್ತಮ. ಅಂಥವನು ಈ ಸ್ತೋತ್ರವನ್ನು ಪಠಿಸಬೇಕು. ಹಲ್ಲುಗಳು ಸರಿಯಾಗಿ ಇಲ್ಲವೆಂದಾದರೆ ಸ್ಪಷ್ಟವಾಗಿ, ಚೆನ್ನಾಗಿ ಸ್ತೋತ್ರವನ್ನು ಪಠಿಸಲು ಆಗುವುದಿಲ್ಲ. ಸ್ಪಷ್ಟವಾಗಿ ಪಠಿಸದಿದ್ದರೆ ಯಥೋಕ್ತವಾದ ಫಲವು ಲಭ್ಯವಾಗುವುದಿಲ್ಲ.

ಹಾಗಾದರೆ ಹಲ್ಲುಗಳು ಇಲ್ಲದವರು, ವೃದ್ಧರು ಈ ಸ್ತೋತ್ರವನ್ನು ಪಠಿಸಬಾರದು ಎಂದು ತಿಳಿಯುವ ಅಗತ್ಯವಿಲ್ಲ. ಈ ಸ್ತೋತ್ರಗಳಲ್ಲಿಯ ವರ್ಣಗಳು, ಅಕ್ಷರಗಳು ವ್ಯತ್ಯಾಸವಾಗದಿದ್ದಂತೆ ಸಾವಧಾನವಾಗಿ, ಎಚ್ಚರಿಕೆಯಿಂದ ಈ ಸ್ತೋತ್ರವನ್ನು ಪಠಿಸಬೇಕು. ಅಥವಾ ಮನಸ್ಸಿನಲ್ಲಿಯೇ ಉಚ್ಚಾರಣ ಮಾಡುತ್ತಾ ಈ ಸ್ತೋತ್ರವನ್ನು ಪಠಿಸಬೇಕು. ತಪ್ಪು-ತಪ್ಪಾಗಿ ಪಠಿಸಬಾರದು ಎಂದಿಷ್ಟೇ ತಾತ್ಪರ್ಯ.

### ಅದ್ವಿಜೋತ್ತಮರು ಈ ಸ್ತುತಿಯನ್ನು ಪಠಿಸುತ್ತಾರೆ

**३) भक्त्याद्विजोत्तम इत्यत्र अद्विजोत्तम इत्यपि पदविभागः सम्भवति । अत्तीति अत् रुद्रः, विः गरुडः, जः देहयोगरूप-जनिमज्जीवाभिमानित्वात् , जन्यपौरुषेय ग्रन्थाभिमानित्वाच्च शेषः अद्विजाः, उत्तमाः यस्य भक्तवर्गस्य सः अद्विजोत्तमः । गरुडशेषरुद्रादि-**

**सर्वभक्तानामपि वायुस्तवनेन मरुदनुग्रहो भवतीति सिद्ध्यति । ननु व्यासराजकृतं स्तोत्रं गरुडादयः कुतः पठन्तीति न वक्तव्यम् । अस्मदादिमनआद्यभिमानितया त एव खलु मुख्यतः पठनकर्तारः ।**

ಭಕ್ತ್ಯಾದ್ವಿಜೋತ್ತಮಃ ಎಂಬಲ್ಲಿ ಭಕ್ತ್ಯಾ ಅದ್ವಿಜೋತ್ತಮಃ ಎಂದೂ ಪದಚ್ಛೇದ ಮಾಡಿಕೊಳ್ಳಬಹುದು. ಅದ್ವಿಜೋತ್ತಮಃ ಎಂಬ ವಿಭಾಗವನ್ನಷ್ಟೇ ತಿಳಿಯುವುದಲ್ಲ. ಅದಕ್ಕೆ ಅರ್ಥವನ್ನೂ ತಿಳಿಯಬೇಕು. ಅದ್ವಿಜೋತ್ತಮಃ ಎಂಬ ಪದವನ್ನು ಅತ್ ವಿ ಜ ಉತ್ತಮಃ ಎಂಬುದಾಗಿ ಪ್ರತ್ಯೇಕವಾಗಿ ಬಿಡಿಸಿಕೊಳ್ಳಬೇಕು.

ಅತ್ತಿ ಇತಿ ಅತ್ ಸಂಹರಿಸುತ್ತಾನೆ ಆದ್ದರಿಂದ **ಅತ್** ಎಂದರೆ ರುದ್ರದೇವರು.''ವಿಃ ಪಕ್ಷಿಪರಮಾತ್ಮನೋಃ'' ಎಂದು ಕೋಶವಿರುವುದರಿಂದ **ವಿ** ಅಂದರೆ ಪಕ್ಷಿಶ್ರೇಷ್ಠರಾದ ಗರುಡದೇವರು. ದೇಹಸಂಬಂಧರೂಪವಾದ ಜನ್ಮವಿರುವ ಜೀವರಿಗೆ ಅಭಿಮಾನಿಗಳಾಗಿದ್ದಾರೆ ಶೇಷದೇವರು. ಮತ್ತು ಜನ್ಯವಾದ ಪೌರುಷೇಯಗ್ರಂಥಗಳಿಗೂ ಅಭಿಮಾನಿಗಳಾಗಿದ್ದಾರೆ. ಆದ್ದರಿಂದ **ಜ** ಎಂದರೆ ಶೇಷದೇವರು. **ಉತ್ತಮ** ಯಾವ ಭಕ್ತಸಮುದಾಯಕ್ಕೆಲ್ಲ ಈ ದೇವತೆಗಳು ಶ್ರೇಷ್ಠರಾಗಿರುವರೋ ಅಂಥ ಭಕ್ತವರ್ಗ ಅದ್ವಿಜೋತ್ತಮ ಎನಿಸುತ್ತದೆ.

**ಅದ್ವಿಜೋತ್ತಮಃ** ರುದ್ರ-ಗರುಡ-ಶೇಷದೇವರೇ ಉತ್ತಮರಾಗಿ ಉಳ್ಳ ಭಗವದ್ಭಕ್ತಸಮುದಾಯವು ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸುತ್ತದೆ ಎಂದು ಅಭಿಪ್ರಾಯ ಬರುತ್ತದೆ. ಇದರಿಂದ ರುದ್ರ-ಗರುಡ-ಶೇಷಾದಿ- ದೇವತೆಗಳು ಕೂಡಾ ಈ ಸ್ತೋತ್ರವನ್ನು ಪಠಿಸುತ್ತಾರೆ ಎಂಬ ಅಭಿಪ್ರಾಯವು ಬರುತ್ತದೆ.

ಹೀಗೆ ಹೇಳಿದರೆ ಒಂದು ಸಮಸ್ಯೆ ಬರುತ್ತದೆ. ರುದ್ರಾದಿದೇವತೆಗಳು ವ್ಯಾಸರಾಜರು ಬರೆದ ಈ ಸ್ತೋತ್ರವನ್ನು ಯಾಕೆ ಪಠಿಸುತ್ತಾರೆ? ಯಾಕೆಂದರೆ ಉತ್ತಮರು ರಚಿಸಿದ ಸ್ತೋತ್ರಗಳನ್ನು ಮಾತ್ರ ಪಾರಾಯಣ ಮಾಡಬೇಕು. ಸಣ್ಣವರು ರಚಿಸಿದ ಸ್ತೋತ್ರಗಳನ್ನು ದೊಡ್ಡವರು ಪಠಿಸಕೂಡದು. ವ್ಯಾಸರಾಜರು ರುದ್ರಾದಿದೇವತೆಗಳಿಗಿಂತಲೂ ಚಿಕ್ಕವರಲ್ಲವೇ? ಆದ್ದರಿಂದ ರುದ್ರಾದಿದೇವತೆಗಳು ಈ ಸ್ತೋತ್ರವನ್ನು ಪಠಿಸುತ್ತಾರೆ ಎಂದು ಹೇಳುವುದು ಸೂಕ್ತವಾಗುವುದಿಲ್ಲ ಎಂದು ಶಂಕಿಸಬಾರದು. ಯದ್ಯಪಿ ಸಾಕ್ಷಾತ್ತಾಗಿ ಈ ಸ್ತೋತ್ರವನ್ನು ಪಠಿಸದಿದ್ದರೂ ಮನಸ್ಸು

ಮತ್ತು ವಾಗಾದಿ ಇಂದ್ರಿಯಗಳನ್ನು ಪ್ರೇರಿಸುವ ಈ ದೇವತೆಗಳು ನಮ್ಮಲ್ಲಿ ನಿಂತು ಈ ಸ್ತೋತ್ರವನ್ನು ಪಠಿಸುತ್ತಾರೆ ಎಂದು ತಿಳಿದರೆ ತಪ್ಪಾಗುವುದಿಲ್ಲ.

**४) द्विजः गरुडः तदभिमन्यमानो वेदः तज्ज्ञानमिति यावत् । उत्तमः यस्मिन् सः । महालाभश्चेदपेक्षितो वेदज्ञानमावश्यकमिति दर्शयन्ति ।**

ದ್ವಿಜಃ ಉತ್ತಮಃ ಯಸ್ಮಿನ್ ಸಃ ಎಂಬ ವಿಗ್ರಹವನ್ನು ಆಶ್ರಯಿಸಿ ಮತ್ತೊಂದು ರೀತಿಯಾಗಿ ಅರ್ಥವನ್ನು ತಿಳಿಯಬೇಕು.

**ದ್ವಿಜಃ** ಎಂದರೆ ಪಕ್ಷಿಯಾದ ಗರುಡ ಎಂದು ಅರ್ಥ. ಗರುಡ ಎಂದೇ ಅರ್ಥವನ್ನು ಇಲ್ಲಿ ತಿಳಿಯುವುದಲ್ಲ. ಕಿಂತು ಗರುಡನಿಂದ ಅಭಿಮನ್ಯಮಾನವಾದ ವೇದದ ಜ್ಞಾನ ಎಂಬ ಅರ್ಥವನ್ನು ಪ್ರಕೃತ ಸ್ವೀಕರಿಸಬೇಕು. ಅಂಥ ವೇದಜ್ಞಾನ ಉಳ್ಳ ಬ್ರಾಹ್ಮಣ ಈ ಸ್ತುತಿಯನ್ನು ಪಠಿಸಿದರೆ ಉತ್ತಮವಾದ ಫಲವು ಆ ಅಧಿಕಾರಿಗೆ ಲಭ್ಯವಾಗುತ್ತದೆ. ಎಂದು ತಿಳಿಯಬೇಕು.

ಈ ಸ್ತುತಿಯಿಂದ ಉತ್ತಮವಾದ ಪ್ರಯೋಜನವು ಅಪೇಕ್ಷಿತವಾಗಿದ್ದರೆ ವೇದಜ್ಞಾನವು ಅತ್ಯಂತ ಆವಶ್ಯಕ ಎಂದು ಈ ಮಾತಿನಿಂದ ತಿಳಿಸುತ್ತಿದ್ದಾರೆ.

### ವಾಂಛಿತಂ ಲಭತೇಽಭೀಷ್ಟಮ್

**१) वाञ्छितं अपेक्षितं अभीष्टं लभते । अभि भयरहितं इष्टं अभीष्टम् । वाञ्छितप्राप्तिरेव कदाचिद् भवति परन्तु तया साकं भयमपि प्राप्नोति । वायोरनुग्रहेण यल्लभ्यते वाञ्छितं तत्तु भयरहितेष्टं सल्लभ्यते इति भावः । अवश्यं चैतदेवं विज्ञेयमन्यथा पौनरुक्त्यापत्तेः ।**

ಅಪೇಕ್ಷಿತವಾದ ಅಭೀಷ್ಟಗಳನ್ನು ಪಡೆಯುತ್ತಾನೆ. ಅಥವಾ ಅಭಿ ಇಷ್ಟಂ ಎಂದು ಪದಚ್ಛೇದ ಮಾಡಿಕೊಂಡು ಅರ್ಥವನ್ನು ತಿಳಿಯಬಹುದು. ಅಭಿ ಎಂದರೆ ಭಯರಹಿತವಾದ ಇಷ್ಟಗಳನ್ನು ಪಡೆಯುತ್ತಾನೆ ಎಂದು ಅಭಿಪ್ರಾಯ.

ಹಲವು ಬಾರಿ ಇಷ್ಟಗಳನ್ನು ಪಡೆಯುತ್ತಾನೆ. ಆ ಇಷ್ಟಗಳ ಜೊತೆ ಭಯವನ್ನೂ ಹೊಂದುತ್ತಾನೆ. ಆದರೆ ಈ ಸ್ತುತಿಯಿಂದ ಪ್ರಸನ್ನರಾದ ವಾಯುದೇವರ ಅನುಗ್ರಹದಿಂದ ಭಯರಹಿತವಾದ ಅಭೀಷ್ಟಗಳನ್ನು ಪಡೆಯುತ್ತಾನೆ. ಇಲ್ಲಿ ಹೀಗೆಯೇ ಅರ್ಥವನ್ನು ತಿಳಿಯುವುದು ಸ್ವರಸವಾಗುತ್ತದೆ. ಹೀಗೆ ಅರ್ಥ ಮಾಡದಿದ್ದರೆ ವಾಂಛಿತಂ ಅಭೀಷ್ಟಂ ಎರಡೂ ಪದಗಳು ಒಂದೇ ಅರ್ಥವನ್ನು ಹೇಳುತ್ತಿರುವುದರಿಂದ ಪುನರುಕ್ತಿ ಎಂಬ ದೋಷಕ್ಕೆ ಅವಕಾಶವಿದೆ.

**२) यद्वा वाञ्छितं स्वेन स्तोत्रपाठकेन अपेक्षितं स्तोत्रपाठकः स लभते । भिक्षां देहीत्युक्ते मह्यमिति यथा अनुक्तमपि सिद्ध्यति तथा त्रिवारं यः पठेत् तेन वाञ्छितमिति अकथितमपि सेत्स्यति ।**

ಈ ಸ್ತೋತ್ರವನ್ನು ಪಠಿಸುವವರು ಬೇರೆ. ಫಲವನ್ನು ಪಡೆಯುವವರು ಬೇರೆ ಎಂಬುದಾಗಿ ತಿಳಿಯಬಾರದು. ಈ ಸ್ತೋತ್ರವನ್ನು ಮೂರು ಬಾರಿ ಯಾರು ಪಠಿಸುತ್ತಾರೋ ಅವರೇ ಅಪೇಕ್ಷಿತವಾದ ಅಭೀಷ್ಟಗಳನ್ನು ಪಡೆಯುತ್ತಾರೆ. ಭೀಕ್ಷಾಂ ದೇಹಿ ಎಂದು ಹೇಳಿದಾಗ **ಮೇ** ನನಗೆ ಎಂದು ಹೇಳದಿದ್ದರೂ ನನಗೆ ಎಂದೇ ಸಿದ್ಧವಾಗುತ್ತದೆ. ಹಾಗೆಯೇ ಇಲ್ಲಿ ಸ್ತೋತ್ರಪಾಠಕನಿಗೆ ಫಲವು ಲಭ್ಯವಾಗುತ್ತದೆ ಎಂಬ ವಿಷಯವು ಸಿದ್ಧವಾಗುತ್ತದೆ. ಅಭೀಕ್ಷ್ಣಂ ಎಂಬುದಾಗಿಯೂ ಕೆಲವು ಕಡೆ ಪಾಠವಿದೆ.

**३) न केवलमेतावत्, किन्तु अभीष्टमपि स लभते । अभीष्टं नाम अभितः सर्वैः इष्टं यत्तत् । कानिचिद्वस्तूनि सर्वेषामपीष्टानि भवन्ति । यथा अन्नवस्त्रादीनि आयुरारोग्यादीनि । कानिचित् केवलं तस्य तस्य पुरुषस्य अपेक्षितानि भवन्ति । यथा तत्तदारब्धकार्य-परिसमाप्यादीनि तदुभयमपि लभत इति भावः ।**

ತನಗೆ ಇಷ್ಟವಾದವುಗಳನ್ನು ಪಡೆಯುತ್ತಾನೆ ಎಂದು ಇಲ್ಲಿಯವರೆಗೆ ತಿಳಿದಾಯಿತು. ಇಷ್ಟು ಮಾತ್ರವಲ್ಲ. ಅಭಿ ಎಂದರೆ ಅಭಿತಃ ಅಂದರೆ ಎಲ್ಲರಿಗೂ ಎಂದು ಅರ್ಥ. ಅಭೀಷ್ಟ ಎಂದರೆ ಎಲ್ಲರಿಗೂ ಇಷ್ಟವಾಗುವಂಥ ಫಲಗಳನ್ನು ಪಡೆಯುತ್ತಾನೆ ಎಂದು ಅರ್ಥ. ಹಲವು ವಸ್ತುಗಳು ಎಲ್ಲರಿಗೂ

ಅಭೀಷ್ಟವಾಗಿರುತ್ತವೆ. ಅನ್ನ-ವಸ್ತ್ರಗಳು, ಆಯುರಾರೋಗ್ಯಗಳು ಇವು ಎಲ್ಲರಿಗೂ ಇಷ್ಟವಾಗಿರುತ್ತವೆ. ಕೆಲವು ತನಗೆ ಮಾತ್ರ ಇಷ್ಟವಾಗಿರುತ್ತವೆ. ಅವರವರು ಪ್ರಾರಂಭಿಸಿದ ಕಾರ್ಯಗಳ ಪರಿಸಮಾಪ್ತಿ ಇತ್ಯಾದಿಗಳು ಎಲ್ಲರಿಗೂ ಇಷ್ಟವಾಗಿರುವುದಿಲ್ಲ. ಈ ಸ್ತುತಿಯ ಪಾರಾಯಣದಿಂದ ತನಗೆ ಇಷ್ಟವಾದಂಥ, ಮತ್ತು ಎಲ್ಲರಿಗೂ ಇಷ್ಟವಾಗುವಂಥ ಫಲಗಳನ್ನು ಪಡೆಯುತ್ತಾನೆ.

**४) अथवा वाञ्छितं लौकिकं इष्टं अभीष्टं भयरहितेष्टं मोक्षरूपम् । शास्त्रेषु अभयशब्देन मोक्षस्य व्यपदेशात् ।**

ಅಥವಾ **ವಾಂಛಿತಂ** ಲೌಕಿಕವಾದ ಅಭೀಷ್ಟಗಳನ್ನು, **ಅಭೀಷ್ಟಂ** ಭಯರಹಿತವಾದ ಮುಕ್ತಿಯನ್ನೂ ಕ್ರಮವಾಗಿ ಪಡೆಯುತ್ತಾರೆ ಎಂದು ತಿಳಿಯಬೇಕು. ಶಾಸ್ತ್ರಗಳಲ್ಲಿ ಅಭಯ ಎಂಬ ಶಬ್ದದಿಂದ ಮುಕ್ತಿಯನ್ನು ವ್ಯವಹರಿಸುತ್ತಾರೆ. ಆದ್ದರಿಂದ ಹೀಗೆ ಅರ್ಥ ತಿಳಿಯುವುದು ತಪ್ಪಾಗದು.

**५) अथवा न विद्यते भीर्येषां ते अभियः वाय्वादयः तेषामेकान्तिनामिष्टं भगवद्रूपमभीष्टं तल्लभते । भगवत्सेवां, भगवद्ध्यानयोगं लभते इति भावः । एवमेव मोक्षं लभते इत्यस्य मोक्षमार्गं लभते इत्यर्थः । तेन षण्मासाभ्यन्तरे मोक्षस्य वा भगवतो वा कथं प्राप्तिरिति शङ्कानवकाशः ।**

ಅಥವಾ ಅಭಿಯಃ ಎಂದರೆ ಭಯವಿಲ್ಲದ ವಾಯ್ವಾದಿದೇವತೆಗಳು ಎಂದು ಅರ್ಥ. ಅವರಿಗೆ ಭಗವಂತನೇ ಇಷ್ಟ. ಈ ಸ್ತೋತ್ರವನ್ನು ಪಠಿಸಿದವರು ವಾಯ್ವಾದಿದೇವತೆಗಳಿಗೆ ಇಷ್ಟನಾದ ಭಗವಂತನನ್ನು ಪಡೆಯುತ್ತಾರೆ ಎಂದು ಅರ್ಥ. ಭಗವಂತನ ಸೇವೆ ಮಾಡುವ ಅವಕಾಶವನ್ನು, ಶ್ರೀಹರಿಯನ್ನು ಚಿಂತಿಸುವ ಅವಕಾಶವನ್ನು ಪಡೆಯುತ್ತಾರೆ. ಹೀಗೆಯೇ ಮುಕ್ತಿಯನ್ನೂ ಪಡೆಯುತ್ತಾರೆ. ಮುಕ್ತಿಯನ್ನು ಪಡೆಯುತ್ತಾರೆ ಎಂದರೆ ಮುಕ್ತಿಯ ಮಾರ್ಗವನ್ನು ಪಡೆಯುತ್ತಾರೆ ಎಂದು ಅರ್ಥ. ಆದ್ದರಿಂದ ಆರು ತಿಂಗಳಲ್ಲಿ ಮುಕ್ತಿಯನ್ನು ಪಡೆಯಲು ಹೇಗೆ ಸಾಧ್ಯ ಎಂಬ ಸಂಶಯಕ್ಕೆ ಅವಕಾಶವಿಲ್ಲ. ಆರು ತಿಂಗಳಲ್ಲಿ ಮುಕ್ತಿಯ ಮಾರ್ಗವನ್ನು ಪಡೆಯುತ್ತಾನೆ ಎಂದಿಷ್ಟೇ ಅರ್ಥ.

यद्वा, यादृशतादृशं लौकिकं वाञ्छित्वा स्तोत्रं पठ्यते चेदपि वायुना वा विष्णुना वा दीयते । परन्तु न तयोस्तदतितरामिष्टं भवति । ''यस्त आशिष आशास्ते न स भृत्यः स वै वणिक्'' (भाग.७.१०.५) इति प्रह्लादराजोक्तदिशा लौकिकमाशासानः वणिग्भावं भजते । अतो वणिग्भावोद्भावकाशंसनगोचरलौकिकार्थलाभो नात्र प्राधान्येन विवक्षितः । किन्तु ज्ञानभक्तिविरक्तिलाभ एव ।

ಲೌಕಿಕವಾದ ಯಾವುದೇ ಅಪೇಕ್ಷೆಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಈ ಸ್ತೋತ್ರವನ್ನು ಪಠಿಸಿದರೂ ಆ ಅಪೇಕ್ಷೆಗಳನ್ನು ಪರಮಾತ್ಮ ಮತ್ತು ವಾಯುದೇವರು ಪೂರ್ಣಮಾಡುತ್ತಾರೆ. ಆದರೆ ಲೌಕಿಕವಾದ ಅಪೇಕ್ಷೆಗಳನ್ನು ಯಾಚಿಸಿದರೆ ದೇವರಾಗಲೀ, ಪ್ರಾಣದೇವರಾಗಲೀ ಅತ್ಯಂತಪ್ರೀತರಾಗುವುದಿಲ್ಲ. ಪ್ರಹ್ಲಾದರಾಜರು ಭಾಗವತದಲ್ಲಿ ಹೇಳಿದಂತೆ ಲೌಕಿಕಕಾಮನೆಗಳನ್ನು ಅಪೇಕ್ಷಿಸುವವನು ವ್ಯಾಪಾರಿಯಾಗುತ್ತಾನೆ. ಆದ್ದರಿಂದ ತನ್ನನ್ನು ವ್ಯಾಪಾರಿಯನ್ನಾಗಿಸುವ ಲೌಕಿಕಕಾಮನೆಗಳನ್ನು ಅಪೇಕ್ಷಿಸುವುದು ಮುಖ್ಯವಲ್ಲ. ಕಿಂತು ಭಗವಂತನ ಜ್ಞಾನ, ಅವನಲ್ಲಿ ಭಕ್ತಿ, ವಿಷಯವಿರಕ್ತಿ ಇವುಗಳ ಅಪೇಕ್ಷೆಯಿಂದಲೇ ಈ ಸ್ತೋತ್ರವನ್ನು ಪಠಿಸಬೇಕು. ಈ ಅಪೇಕ್ಷೆಯನ್ನು ಮಾಡಿದಾಗಲೇ ಭಗವಂತನಾಗಲೀ, ವಾಯುದೇವರಾಗಲೀ ಅತ್ಯಂತವಾಗಿ ಪ್ರೀತರಾಗುತ್ತಾರೆ.

**ಅಭೀಷ್ಟಂ ವಾಂಛಿತಂ ಲಭತೇ**

६) तथाच अभियौ भयरहितौ विष्णुवायू तयोरिष्टं वाञ्छितं लभते । ज्ञानभक्तिविरक्तिविष्णुप्रीत्यादिकं लभत इति भावः ।

ಭಯರಹಿತರಾದದ್ದರಿಂದ ವಿಷ್ಣು-ವಾಯುಗಳು ಅಭಿ ಎನಿಸುತ್ತಾರೆ. ಅವರಿಗೆ ಇಷ್ಟವಾದ ಜ್ಞಾನ-ಭಕ್ತಿ-ವಿರಕ್ತಿ-ವಿಷ್ಣುಪ್ರೀತಿ ಮುಂತಾದವುಗಳನ್ನು ಪಡೆಯುತ್ತಾನೆ.

७) अथवा भयरहितो मोक्ष अभीः अभ्यर्थं मोक्षार्थमिष्टं समपेक्षितमपरोक्षज्ञानं लभते । अस्मिन् पक्षेऽपि ज्ञानसाधनश्रवणादि-

लाभो वा विवक्षणीयः । षण्मासाभ्यन्तरे इत्यस्य वक्ष्यमाणरीत्या अर्थो वा ज्ञातव्यः ।

ಅಥವಾ ಅಭೀ ಎಂದರೆ ಭಯರಹಿತವಾದ ಮುಕ್ತಿ. ಅಂಥ ಅಭಿಗಾಗಿ ಮುಕ್ತಿಗಾಗಿ ಅತ್ಯಂತ ಉಪಯುಕ್ತವಾದ ಅಪರೋಕ್ಷಜ್ಞಾನವವನ್ನು ಈ ಸ್ತೋತ್ರದ ಪಾಠಕನು ಪಡೆಯುತ್ತಾನೆ. ಅಪರೋಕ್ಷಜ್ಞಾನಕ್ಕೆ ಸಾಧನವಾದ ಶ್ರವಣಾದಿಗಳ ಲಾಭವು ಸ್ತೋತ್ರಪಾಠಕನಿಗೆ ಆಗುತ್ತದೆ ಎಂದು ತಿಳಿಯಬೇಕು. ಅಥವಾ ಮುಕ್ತಿಯ ಮಾರ್ಗ ಅಂಥವನಿಗೆ ದೊರೆಯುತ್ತದೆ ಎಂದು ತಿಳಿಯಬೇಕು.

**ಷಣ್ಮಾಸಾಭ್ಯಂತರೇ ಅಭೀಷ್ಟಂ ಲಭತೇ**

१) षण्मासाभ्यन्तरे षण्णां मासानामभ्यन्तरे मध्ये वाञ्छितं अभीष्टं लभते इत्यन्वयः ।

ಪ್ರತಿನಿತ್ಯವೂ ಈ ಸ್ತೋತ್ರವನ್ನು ಮೂರುಬಾರಿ ಭಕ್ತಿಯಿಂದ ಪಠಿಸಬೇಕು. ಆರುತಿಂಗಳಲ್ಲಿಯೇ ಅವನು ಎಲ್ಲ ಅಭೀಷ್ಟಗಳಿಂದ ಸಂಪನ್ನನಾಗುತ್ತಾನೆ.

२) अथवा षड्गुणरूपत्वात् षट्, मासनियामकत्वान्मासः, मारूपत्वात् ज्ञानरूपत्वात् मा, साररूपत्वात् सः । षट् चासौ मासश्चेति वा षट्चासौ मा चासौ सश्चेति षण्मासः विष्णुः । तस्मिन् आभ्यन्तरं अन्तःकरणं मनः तस्मिन् षण्मासाभ्यन्तरे । वाय्वन्तर्यामिणि सर्वोत्तमे हरौ मनो लग्नं चेदेव अभीष्टप्राप्तिर्नान्यथेति भावः । षड्गुणरूपत्वमारूपत्वयोः कथनं कुरुपाण्डवन्यायेन ।

ಈಶ್ವರತ್ವ, ವೀರ್ಯ, ಕೀರ್ತಿ, ಸಂಪತ್ತು, ಜ್ಞಾನ ಮತ್ತು ವೈರಾಗ್ಯ ಈ ಆರು ಗುಣಗಳಿಂದ ಭಗವಂತ ಸಂಪನ್ನನಾಗಿದ್ದಾನೆ. ಈ ಆರು ಗುಣಗಳಿಗೂ ಭಗವಂತನಿಗೂ ಭೇದವಿಲ್ಲ. ಈ ಗುಣಗಳು ಭಗವಂತನ ಸ್ವರೂಪ. ಷಡ್ಗುಣಸ್ವರೂಪನಾದದ್ದರಿಂದ ಭಗವಂತನಿಗೆ **ಷಟ್** ಎಂದು ಹೆಸರು. ಮಾಸನಿಯಾಮಕನಾದದ್ದರಿಂದ **ಮಾಸ**ನಾಮಕನಾಗಿದ್ದಾನೆ. ಅಥವಾ **ಮಾ**=ಜ್ಞಾನ, **ಸ**=ಸಾರರೂಪ, ಜ್ಞಾನಸಾರರೂಪನಾದದ್ದರಿಂದ ಭಗವಂತ **ಮಾಸ** ಎನಿಸಿದ್ದಾನೆ.

ಷಡ್ಗುಣಸ್ವರೂಪನಾದದ್ದರಿಂದ, ಜ್ಞಾನಸಾರರೂಪನಾದದ್ದರಿಂದ ಭಗವಂತ **ಷಣ್ಮಾಸ** ಎನಿಸಿಕೊಳ್ಳುತ್ತಾನೆ. ಅಂಥ ಷಣ್ಮಾಸನಾಮಕನಾದ ಭಗವಂತನಲ್ಲಿ ಅಭ್ಯಂತರವನ್ನು=ಮನಸ್ಸನ್ನು ಇಟ್ಟು ಈ ಸ್ತೋತ್ರವನ್ನು ಪಠಿಸಬೇಕು. ಯದ್ಯಪಿ ವಾಯುದೇವರ ಸ್ತೋತ್ರ ಇದಾಗಿದ್ದರೂ, ವಾಯ್ವಂತರ್ಯಾಮಿಯಾದ ಪರಮಾತ್ಮನಲ್ಲಿ ಮನಸ್ಸನ್ನಿಟ್ಟಾಗಲೇ ಅಭೀಷ್ಟಪ್ರಾಪ್ತಿಯಾಗುತ್ತದೆ. ದೇವರಲ್ಲಿ ಮನಸ್ಸಿಡದಿದ್ದರೆ ಯಾವ ಅಭೀಷ್ಟಗಳೂ ಸಿದ್ಧಿಸುವುದಿಲ್ಲ.

ಷಡ್ಗುಣಗಳಲ್ಲಿ ಒಂದು ಗುಣ ಜ್ಞಾನ. ಹೀಗಾಗಿ ಷಡ್ಗುಣರೂಪ ಎಂದು ಹೇಳುವುದರಿಂದಲೇ ಜ್ಞಾನರೂಪ ಎಂಬ ಅರ್ಥವೂ ಹೇಳಿದಂತೆಯೇ ಆಗುತ್ತದೆ. ಆದರೂ ಕುರು-ಪಾಂಡವನ್ಯಾಯವನ್ನು ಅನುಸರಿಸಿ ಹೀಗೆ ಹೇಳಿದೆ ಎಂಬುದಾಗಿ ತಿಳಿಯಬೇಕು.

**३. अथवा षण्मासाः असाधारण्येन व्यपदेशा भवन्तीति न्यायेन उत्तरायणघटकषण्मासा गृह्यन्ते । ते अभ्यन्तरे मध्ये यस्य सः षण्मासाभ्यन्तरः अर्चिरादिमार्गः तस्मिन् अर्चिरादिमार्गे ''अग्निर्ज्योतिरहः शुक्लः षण्मासा उत्तरायणम् । तत्र प्रयाता गच्छन्ति ब्रह्म ब्रह्मविदो जनाः ।। (गीता८.२४) अभीष्टं सन्मानादिकं लभते । अन्ततो अर्चिरादिमार्गे गम्यमभीष्टं भगवद्रूपं लभते श्रवणमनननिदिध्यासनापरोक्षज्ञानभगवत्प्रसादद्वारा लभते निष्कामभक्तश्चेत् । अत्र पक्षे षट्सु मासेषु कथं लभते इति शङ्का नास्ति । षण्मासाभ्यन्तरे इत्यस्य अन्यथा व्याख्यानात् ।**

ಉತ್ತರಾಯಣ-ದಕ್ಷಿಣಾಯನಗಳಲ್ಲಿ ಉತ್ತರಾಯಣವೇ ಪ್ರಧಾನವಾಗಿದೆ. ಆದ್ದರಿಂದ ಆರು ತಿಂಗಳು ಎಂದರೆ ಉತ್ತರಾಯಣದ ಆರು ತಿಂಗಳನ್ನು ತೆಗೆದುಕೊಳ್ಳಬೇಕು. ಆ ಉತ್ತರಾಯಣದ ಆರು ತಿಂಗಳುಗಳನ್ನು ಮಧ್ಯದಲ್ಲಿ ಪಡೆದ ಮಾರ್ಗ ಅರ್ಚಿರಾದಿಮಾರ್ಗ. ಆ ಅರ್ಚಿರಾದಿಮಾರ್ಗದಲ್ಲಿ ಸನ್ಮಾನಾದಿ ರೂಪವಾದ ಅಭೀಷ್ಟವನ್ನು ಪಡೆಯುತ್ತಾನೆ ಎಂದು ತಾತ್ಪರ್ಯ. ಕೊನೆಗೆ ಅರ್ಚಿರಾದಿಮಾರ್ಗದಲ್ಲಿ ಗಮ್ಯವಾದ ಅಭೀಷ್ಟವಾದ ಭಗವದ್ರೂಪವನ್ನು ಪಡೆಯುತ್ತಾನೆ.

ಈ ಸ್ತೋತ್ರದ ಪಠನದಿಂದ ಸಾಕ್ಷಾತ್ತಾಗಿ ಈ ಫಲ ಲಭ್ಯವಾಗುತ್ತದೆಂದು ತಿಳಿಯಬಾರದು. ಕಿಂತು ನಿಷ್ಕಾಮ ಭಕ್ತನಾಗಿದ್ದರೆ ಈ ಸ್ತೋತ್ರದ ಪಠನದಿಂದ, ಶ್ರವಣ-ಮನನ-ನಿದಿಧ್ಯಾಸನ-ಅಪರೋಕ್ಷಜ್ಞಾನ- ಭಗವತ್ಪ್ರಸಾದದ್ವಾರಾ ಈ ಫಲವನ್ನು ಪಡೆಯುತ್ತಾನೆ ಎಂಬುದಾಗಿ ತಿಳಿಯಬೇಕು. ಷಣ್ಮಾಸಾಭ್ಯಂತರೇ ಎಂಬುದಕ್ಕೆ ಈಗ ಬೇರೇ ಅರ್ಥವೇ ಹೇಳಲಾಗಿದೆ. ಆದ್ದರಿಂದ ಆರು ತಿಂಗಳಲ್ಲಿ ಇಷ್ಟೆಲ್ಲ ಫಲವನ್ನು ಹೇಗೆ ಪಡೆಯುತ್ತಾನೆ ಎಂಬ ಶಂಕೆ ಇಲ್ಲ.

**४) सकामभक्तश्चेत् षण्मासाभ्यन्तरे धूमादिमार्गे वाञ्छितं लभते । ''धूमो रात्रिस्तथा कृष्णः षण्मासा दक्षिणायनम् । तत्र चान्द्रमसं ज्योतिः योगी प्राप्य निवर्तते । गीता.८.२५**

ಅಥವಾ ಷಣ್ಮಾಸಾಭ್ಯಂತರೇ ಎಂದರೆ ಧೂಮಾದಿಮಾರ್ಗದಲ್ಲಿ ಎಂದು ಅರ್ಥ. ಸಕಾಮಭಕ್ತನು ಆ ಧೂಮಾದಿಮಾರ್ಗದಲ್ಲಿಯೂ ವಾಂಛಿತವಾದ ಫಲಗಳನ್ನು ಪಡೆಯುತ್ತಾನೆ. ಧೂಮಾದಿಮಾರ್ಗದಿಂದ ಪ್ರಯಾಣ ಮಾಡಿದ ಜೀವನು ಚಾಂದ್ರಮಸಲೋಕಗಳಿಗೆ ಹೋಗಿ ಅಲ್ಲಿ ಸುಖವನ್ನು ಅನುಭವಿಸಿ ಮತ್ತೆ ತಿರುಗಿ ಬರುತ್ತಾನೆ ಎಂಬುದಾಗಿ ಗೀತೆಯು ಉಪದೇಶಿಸುತ್ತದೆ.

**५) अथवा षण्मासाः उत्तरायणगताः तदभिमानित्वात् तच्छब्द-वाच्यः प्राणः । तथा षण्मासा दक्षिणायनगताः तदभिमानित्वात् तच्छब्दवाच्या रयिः भारती । षण्मासाश्च षण्मासाश्च षण्मासाः रयिप्राणौ, तयोः लग्नमाभ्यन्तरं षण्मासाभ्यन्तरम् तस्मिन् सति अभीष्टं लभते ।**

ಅಥವಾ ಷಣ್ಮಾಸಾಃ ಎಂದರೆ ಉತ್ತರಾಯಣದಲ್ಲಿಯ ಆರು ತಿಂಗಳುಗಳು. ಅವುಗಳಿಗೆ ಅಭಿಮಾನಿಯಾದುದರಿಂದ ಮುಖ್ಯಪ್ರಾಣನೂ ಷಣ್ಮಾಸಶಬ್ದದಿಂದ ವಾಚ್ಯನಾಗಿದ್ದಾನೆ. ಹಾಗೆಯೇ ಷಣ್ಮಾಸಗಳು ಎಂದರೆ ದಕ್ಷಿಣಾಯನದಲ್ಲಿಯ ಆರು ತಿಂಗಳುಗಳು. ಆ ಆರು ತಿಂಗಳುಗಳಿಗೆ ಅಭಿಮಾನಿನಿಯಾದ ರಯಿನಾಮಕಳಾದ ಭಾರತಿಯೂ ಷಣ್ಮಾಸಶಬ್ದವಾಚ್ಯಳಾಗಿದ್ದಾಳೆ. ಹೀಗಾಗಿ ರಯಿ-ಪ್ರಾಣರು ಷಣ್ಮಾಸರು. ಆ ಷಣ್ಮಾಸರಲ್ಲಿ ಲಗ್ನವಾದ ಮನಸ್ಸಿನಿಂದ ಈ ಸ್ತುತಿಯನ್ನು ಪಠಿಸಿದರೆ ಶೀಘ್ರವಾಗಿ ಅಭೀಷ್ಟಗಳನ್ನು ಪಡೆಯುತ್ತಾರೆ ಎಂದು ತಾತ್ಪರ್ಯ.

तथा च मिलित्वा भारतीरमणप्राणान्तर्गतविष्णौ मनः संलग्नं चेदेव अभीष्टं लभ्यते । यादृशतादृशवाञ्छितं अन्यथापि सामान्य-श्रद्धयापि लभेत नाम । परन्तु अभीष्टं निरुक्तं तु भारतीरमणमुख्य-प्राणान्तर्गतविष्णौ मनः संलग्नं चेदेवेति भावः । खलु निश्चितमेतत् ।

ಒಟ್ಟಾರೆ ಭಾರತೀರಮಣಮುಖ್ಯಪ್ರಾಣಾಂತರ್ಯಾಮಿಯಾದ ವಿಷ್ಣುವಿನಲ್ಲಿ ಮನಸ್ಸು ಆಸಕ್ತವಾಗಿದ್ದರೆ ಮಾತ್ರ ಹಿಂದೆ ಹೇಳಿದ ಪ್ರಧಾನವಾದ ಅಭೀಷ್ಟವನ್ನು ಪಡೆಯಲು ಸಾಧ್ಯ. ಲೌಕಿಕವಾದ ವಾಂಛಿತಗಳು ಸಾಮಾನ್ಯವಾದ ಶ್ರದ್ಧೆಯಿಂದಲೇ ಲಭ್ಯವಾಗುತ್ತವೆ. ಆದರೆ ಭಗವತ್ಪ್ರಾಪ್ತಿರೂಪವಾದ ಫಲವು ಲಭ್ಯವಾಗಬೇಕೆಂದರೆ ಭಾರತೀರಮಣಮುಖ್ಯಪ್ರಾಣಾಂತರ್ಯಾಮಿಯಾದ ಶ್ರೀಹರಿಯಲ್ಲಿ ಮನಸ್ಸನ್ನು ನಿಶ್ಚಲಗೊಳಿಸಿ ಸಾಧನೆ ಮಾಡಬೇಕಾಗುತ್ತದೆ. ಈ ವಿಷಯ ನಿಶ್ಚಿತ. ಈ ವಿಷಯದಲ್ಲಿ ಸಂದೇಹವೇ ಇಲ್ಲ.

६) अथवा षण्णां कामक्रोधादीनां मा अभावः, ''अमानोनाः प्रतिषेधे'' । सा भारती छान्दोग्यभाष्ये ''साररूपत्वात् सा भारती'' इत्युक्तेः । तदभिमन्यमानगुरुभक्त्यादिगुणाः लक्षणया गृह्यन्ते । सायुक्तं गुरुभक्त्यादियुक्तं आभ्यन्तरं साभ्यन्तरम् । षण्मायुक्तं साभ्यन्तरम् षण्मासाभ्यन्तरम् । तस्मिन् सत्येव अभीष्टं लभते । तदेव विवृणोति पुत्रार्थी पुत्रं लभते ।

ಷಣ್ಣಾಂ ಮಾ ಷಣ್ಮಾ, ಸಾಯುಕ್ತಂ ಆಭ್ಯಂತರಂ ಸಾಭ್ಯಂತರಂ, ಷಣ್ಮಾಯುಕ್ತಂ ಸಾಭ್ಯಂತರಂ ಷಣ್ಮಾಸಾಭ್ಯಂತರಂ, ತಸ್ಮಿನ್ ಷಣ್ಮಾಸಾಭ್ಯಂತರೇ ಎಂಬುದಾಗಿ ವಿಗ್ರಹ ಮಾಡಿಕೊಳ್ಳಬೇಕು.

**ಷಣ್ಣಾಂ** ಕಾಮಕ್ರೋಧಾದಿ ಆರುವೈರಿಗಳ **ಮಾ** ಅಭಾವದಿಂದ ಯುಕ್ತವಾದ, **ಸಾ** ಸಾರರೂಪಳಾದ ಸರಸ್ವತೀದೇವಿ ಅವಳಿಂದ ಅಭಿಮನ್ಯಮಾನವಾದ ಗುರುಭಕ್ತ್ಯಾದಿಗಳಿಂದ ಯುಕ್ತವಾದ **ಆಭ್ಯಂತರಂ** ಮನಸ್ಸು, ಇಂಥ ಮನಸ್ಸಿನಿಂದ ಈ ಸ್ತುತಿಯನ್ನು ಪಠಿಸಬೇಕು.

ಕಾಮ-ಕ್ರೋಧಾದಿ ಆರರ ಅಭಾವದಿಂದ ಯುಕ್ತವಾದ, ಸರಸ್ವತಿಯಿಂದ ಅಭಿಮನ್ಯಮಾನವಾದ ಗುರುಭಕ್ತ್ಯಾದಿಗಳಿಂದ ಯುಕ್ತವಾದ ಮನಸ್ಸುಳ್ಳವನಾಗಿ ಈ ಸ್ತೋತ್ರವನ್ನು ಪಠಿಸಿದರೆ ಮಾತ್ರ ಪ್ರಯೋಜನಗಳು ಈಡೇರುತ್ತವೆ. ಗುರುಭಕ್ತ್ಯಾದಿಗಳಿಲ್ಲದೇ, ಕಾಮ-ಕ್ರೋಧಾದಿಗಳಿಗೆ ವಶನಾದರೆ ಯಾವ ಮಂತ್ರಗಳೂ ಫಲಿಸುವುದಿಲ್ಲ. ಈ ವಿಷಯವನ್ನೇ ಪುತ್ರಾರ್ಥೀ ಇತ್ಯಾದಿಯಾಗಿ ವಿವರಿಸಿದ್ದಾರೆ.

**ಭಕ್ತಿಮಾನ್ ಗುರುದೇವೇಷು ವಾಸುದೇವೇ ಚ ಸಿದ್ಧ್ಯತಿ ।**
**ಗುರುದೇವಪ್ರತೀಪಾನಾಂ ವಿಮುಖಸ್ತತ್ಕ್ರಿಯೋ ರತಃ ॥** ತಂ.ಸಾ.೪.೧೧೦॥

**ಅಕಾಮಕ್ರೋಧಲೋಭಶ್ಚ ನ ಚಿರಾತ್ಸಿದ್ಧಿಮಾಪ್ನುಯಾತ್ ।**
**ಸಕಾಮೇಭ್ಯೋಽಮಿತಗುಣಾ ಹ್ಯಕಾಮೈಸ್ತು ಕೃತಾಃ ಕ್ರಿಯಾಃ ॥**
ತಂ.ಸಾ.೪.೧೧೧

ಇತ್ಯಾದಿಯಾಗಿ ತಂತ್ರಸಾರಸಂಗ್ರಹದಲ್ಲಿಯೂ ಶ್ರೀಮದಾಚಾರ್ಯರು ಈ ವಿಷಯಗಳನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ.

## ಪುತ್ರಾರ್ಥೀ ಲಭತೇ ಪುತ್ರಮ್

१) पुत्रकामः स्तोत्रं भक्त्या पठति चेत् पुत्रं लभते । ननु षण्मासाभ्यन्तरे पुत्रलाभः कथम्? नवमासाः खलु अनिवार्यतया अपेक्षिता इति चेत् सत्यम्, तथापि पुत्रोत्पादसूचनं लभ्यते इति भावः । गर्भधारणोत्तरं मासत्रयानन्तरं स्तोत्रं पठति चेत् तदिच्छानुसारेण पुत्रप्रसवः सुखप्रसवः षण्मासाभ्यन्तरे भवति । गर्भपातादिकं न भवतीति भावः ।

ಪುತ್ರಕಾಮನಾದವನು ಭಕ್ತಿಯಿಂದ ಈ ಸ್ತುತಿಯನ್ನು ಪಠಿಸಿದರೆ ಆರು ತಿಂಗಳಲ್ಲಿಯೇ ಸಂತಾನವಾಗುತ್ತದೆ. ಆರು ತಿಂಗಳಲ್ಲಿ ಪುತ್ರೋತ್ಪತ್ತಿ ಅಸಾಧ್ಯ. ಪುತ್ರೋತ್ಪತ್ತಿಗೆ ಹತ್ತು ತಿಂಗಳು ಬೇಕೇ ಬೇಕಲ್ಲವೇ? ಎಂಬ ಸಂಶಯ ಬೇಡ. ಪುತ್ರೋತ್ಪತ್ತಿಯ ಸೂಚನೆಯನ್ನು ಪಡೆಯುತ್ತಾನೆ ಎಂದು ಈ ಮಾತಿಗೆ ಅರ್ಥ. ಗರ್ಭದ ಧಾರಣೆಯಾಗಿ ಮೂರು ತಿಂಗಳಾದ ಮೇಲೆ ಆರು ತಿಂಗಳ ತನಕ ಈ

ಸ್ತೋತ್ರವನ್ನು ಜಪಿಸಿದರೆ ಪುತ್ರಪ್ರಸವ, ಸುಖಪ್ರಸವ ಆಗುತ್ತದೆ. ಗರ್ಭಪಾತಾದಿಗಳು ಸಂಭವಿಸುವುದಿಲ್ಲ ಎಂದು ಅಭಿಪ್ರಾಯ.

### ಪುತ್ರಾರ್ಥೀ ಅಪುತ್ರಂ ಲಭತೇ

**२) अथवा पुत्रार्थी– पुत्रनिवृत्त्यर्थी । पुत्रपदेन लक्षणया पुत्रोत्पादादिरूपसंसारो ज्ञाप्यते । तन्निवृत्यर्थी लभते अपुत्रं भावप्रधानो निर्देशः अपुत्रत्वं संसारनिवृत्तिं लभते । ''अर्थोऽभिधेयरैवस्तु-प्रयोजननिवृत्तिषु'' इत्यमरः । पुत्रस्य अर्थः निवृत्तिः अर्थः प्रयोजनं अस्य इति पुत्रार्थी । एकस्यार्थशब्दस्यादर्शनम् ।**

ಅಥವಾ ಪುತ್ರಾರ್ಥೀ ಎಂದರೆ ಪುತ್ರರ ನಿವೃತ್ತಿಯನ್ನು ಅಪೇಕ್ಷಿಸುವವನು ಎಂದು ಅರ್ಥ. ಪುತ್ರ ಎಂಬ ಪದದಿಂದ ಪುತ್ರೋತ್ಪಾದಾದಿರೂಪವಾದ ಸಂಸಾರವನ್ನು ಪ್ರಕೃತ ತೆಗೆದುಕೊಳ್ಳಬೇಕು. **ಪುತ್ರಾರ್ಥೀ** ಪುತ್ರೋತ್ಪಾದಾದಿ ರೂಪವಾದ ಸಂಸಾರದ ನಿವೃತ್ತಿಯನ್ನು ಬಯಸುವವನು **ಅಪುತ್ರಂ ಲಭತೇ** ಅಪುತ್ರತ್ವವನ್ನು ಅಂದರೆ ಸಂಸಾರದಿಂದ ನಿವೃತ್ತಿಯನ್ನು ಪಡೆಯುತ್ತಾನೆ.

ಪುತ್ರಾರ್ಥೀ ಲಭತೇ ಪುತ್ರಂ ಇತ್ಯಾದಿ ವಚನಗಳಿಂದ ಈ ಸ್ತುತಿಯನ್ನು ಸನ್ಯಾಸಿಗಳು ಪಠಿಸಬಾರದು ಎಂದಾಗುತ್ತದೆ. ಅದಕ್ಕಾಗಿ ಮತ್ತೊಂದು ರೀತಿಯಾಗಿ ''ಪುತ್ರಾರ್ಥೀ ಲಭತೇ ಅಪುತ್ರಂ'' ಎಂದು ಬಿಡಿಸಿಕೊಂಡು ಅರ್ಥ ಮಾಡಲಾಗಿದೆ. ಸಂಸಾರದ ನಿವೃತ್ತಿಯನ್ನು ಬಯಸಿ ಈ ಸ್ತುತಿಯನ್ನು ಪಠಿಸಿದವರು ವಿರಕ್ತರಾಗುತ್ತಾರೆ. ಸಂಸಾರದಿಂದ ನಿವೃತ್ತರಾಗುತ್ತಾರೆ.

### ನಾರಾಯಣನೇ ಪುತ್ರ

**३) अथवा पुन्नामनरकात् त्रायत इति पुत्रः नारायणः । स एव हि नरकादस्मान् रक्षति । तदर्थी तत्प्राप्त्यर्थी पुत्रं नारायणं लभते ।**

ಪುನ್ನಾಮನರಕಾತ್ ತ್ರಾಯತೇ ಇತಿ ಪುತ್ರಃ ಎಂಬ ಯೋಗವನ್ನು ಆಶ್ರಯಿಸಿದಾಗ, ಪುತ್ರಶಬ್ದಕ್ಕೆ ಪ್ರಧಾನವಾಗಿ ನಾರಾಯಣ ಎಂಬ ಅರ್ಥ ಬರುತ್ತದೆ. ನಿಜವಾಗಿ ನಮಗೆ ಪುನ್ನಾಮನರಕದಿಂದ ರಕ್ಷಿಸುವವನು ಭಗವಂತನೇ

ಆಗಿದ್ದಾನೆ. ಆದ್ದರಿಂದ ಭಗವಂತನೇ ಪುತ್ರಶಬ್ದದ ಮುಖ್ಯಾರ್ಥ ಎನಿಸುತ್ತಾನೆ. ಅಂಥ ಪುತ್ರನಾಮಕನಾದ ನಾರಾಯಣನನ್ನು ಪಡೆಯಬೇಕೆಂಬ ಅಪೇಕ್ಷೆ ಇದ್ದವರು **ಪುತ್ರಂ** ನಾರಾಯಣನನ್ನು **ಲಭತೇ** ಪಡೆಯುತ್ತಾರೆ. ಹೀಗೂ ಅರ್ಥವನ್ನು ಮಾಡಬಹುದು.

### ಯಶೋಽರ್ಥೀ ಲಭತೇ ಯಶಃ

**१) यशोऽर्थी लभते यशः यशस्कामः स्तोत्रं जपति यः सः यशः ''दिक्षु यानाद् यशो व्याप्तं'' इत्युक्तरीत्या सर्वदिक्षु व्याप्तं यशः लभते ।**

ಕೀರ್ತಿಯ ಅಪೇಕ್ಷೆಯಿಂದ ಈ ಸ್ತೋತ್ರವನ್ನು ಪಠಿಸಿದರೆ, ಅವನ ಕೀರ್ತಿಯು ಎಲ್ಲ ದಿಕ್ಕುಗಳಲ್ಲಿಯೂ ವ್ಯಾಪ್ತವಾಗುತ್ತದೆ.

### ಯಶೋಽರ್ಥೀ ಅಯಶಃ ಲಭತೇ

**२) निरुक्तरीत्या यशोऽर्थी साधनप्रतिबन्धकयशोनिवृत्यर्थी अयशः साधनप्रतिबन्धकयशोऽभावं लभते । यद्वा यशोऽर्थी यः ज्ञानरूपी शाः सुखरूपी यश्चासौ शाश्च यशाः ज्ञानानन्दरूपी विष्णुः वायुर्वा स्वस्वरूपं वा तल्लभते । स्वस्वरूपं लभत इत्यस्य स्वरूपाविर्भावं लभत इत्यर्थः । अकारान्तशशब्दवत् सकारान्तशस्शब्दोऽपि सुखवाचीति स्वीकृत्य व्याख्यातम् । ''नभं तु नभसा सह'' इतिवत् ।**

ಅಥವಾ ಹಿಂದೆ ತಿಳಿಸಿದಂತೆ, ಯಶೋಽರ್ಥೀ ಎಂದರೆ ಸಾಧನಕ್ಕೆ ಪ್ರತಿಬಂಧಕವಾದ ಕೀರ್ತಿಯ ನಿವೃತ್ತಿಯನ್ನು ಬಯಸಿ ಈ ಸ್ತೋತ್ರವನ್ನು ಜಪಿಸಿದರೆ ಅಯಶಃ ಲಭತೇ ಕೀರ್ತಿಯ ನಿವೃತ್ತಿಯನ್ನು ಪಡೆಯುತ್ತಾನೆ.

ಅಥವಾ **ಯಃ** ಎಂದರೆ ಜ್ಞಾನರೂಪಿಯಾದ ಪರಮಾತ್ಮ ಎಂದು ಅರ್ಥ. **ಶಾಃ** ಎಂದರೆ ಸುಖರೂಪಿಯಾದ ಪರಮಾತ್ಮ ಎಂದು ಅರ್ಥ. **ಯಶಾಃ** ಎಂದರೇ ಜ್ಞಾನಾನಂದಸ್ವರೂಪಿಯಾದ ಪರಮಾತ್ಮ ಎಂದು ಅರ್ಥ. ಅಥವಾ

ವಾಯುದೇವರು ಎಂದೂ ಅರ್ಥ. ಅಥವಾ ಸಾತ್ವಿಕರ ಸ್ವರೂಪವೂ ಜ್ಞಾನಾನಂದರೂಪವಾಗಿರುತ್ತದೆ. ಆದ್ದರಿಂದ ಸಾತ್ವಿಕನಾದ ಜೀವನ ಸ್ವರೂಪ ಎಂತಲೂ ಅರ್ಥ. ಪರಮಾತ್ಮನನ್ನು ಪಡೆಯಬೇಕೆಂಬ ಬಯಕೆ ಇದ್ದವನು, ವಾಯುದೇವರನ್ನು ಪಡೆಯಬೇಕೆಂದುಕೊಂಡವರು, ಸ್ವರೂಪಾನಂದಾ-ಭಿವ್ಯಕ್ತಿಯನ್ನು ಪಡೆಯಬೇಕೆಂಬ ಅಪೇಕ್ಷೆ ಇದ್ದವರು **ಯಶಃ ಲಭತೇ** ಪರಮಾತ್ಮನನ್ನು, ವಾಯುದೇವರನ್ನು, ಸ್ವರೂಪಾಭಿವ್ಯಕ್ತಿಯನ್ನು ಪಡೆಯುತ್ತಾರೆ ಎಂದು ಅರ್ಥ.

ಅಕಾರಾಂತವಾದ ಶ ಎಂಬ ಶಬ್ದದಂತೆ ಸಕಾರಾಂತವಾದ ಶಸ್ ಎಂಬ ಶಬ್ದವೂ ಸುಖವಾಚಕವಾಗಿದೆ ಎಂಬ ಅಭಿಪ್ರಾಯದಿಂದ ಈ ರೀತಿಯಾಗಿ ವ್ಯಾಖ್ಯಾನ ಮಾಡಲಾಗಿದೆ.

## ವಿದ್ಯಾರ್ಥೀ ಲಭತೇ ವಿದ್ಯಾಮ್

**१) विद्याकामः ''सा विद्या या विमुक्तये'' इति भागवतोक्तप्रकारेण मोक्षसाधनकामः विद्यां भगवदपरोक्षज्ञानं लभते ।**

''ಸಾ ವಿದ್ಯಾ ಯಾ ವಿಮುಕ್ತಯೇ'' ಎಂದು ಭಾಗವತ ಹೇಳಿದ ಪ್ರಕಾರ ಮುಕ್ತಿಗೆ ಸಾಧನವಾದದ್ದೇ ವಿದ್ಯೆ ಎನಿಸುತ್ತದೆ. ಅಂಥ ವಿದ್ಯೆ ಎಂದರೆ ಅಪರೋಕ್ಷಜ್ಞಾನವೇ ಆಗಿದೆ. ಅಪರೋಕ್ಷಜ್ಞಾನವನ್ನು ಬಯಸಿ ಈ ಸ್ತೋತ್ರವನ್ನು ಜಪಿಸಿದರೆ ಹಿಂದೆ ಹೇಳಿದಂತೆ ಶ್ರವಣಾದಿಗಳ ದ್ವಾರಾ ಅಪರೋಕ್ಷಜ್ಞಾನವನ್ನು ಪಡೆಯುತ್ತಾನೆ.

**२) अथवा ''सा विद्या तन्मतिर्यया'' इत्युक्तरीत्या ज्ञानसाधन-सूत्रवेदादिशास्त्राध्ययनकामः विद्या शास्त्राध्ययनसौभाग्यं लभते ।**

ಅಥವಾ **ವಿದ್ಯಾರ್ಥೀ** ''ಸಾ ವಿದ್ಯಾ ತನ್ಮತಿರ್ಯಯಾ'' ಎಂಬ ಮಾತಿಗೆ ಅನುಗುಣವಾಗಿ ಜ್ಞಾನಕ್ಕೆ ಸಾಧನವಾದ ಸೂತ್ರ-ವೇದಾದಿಶಾಸ್ತ್ರಗಳನ್ನು ಅಧ್ಯಯನ ಮಾಡಬೇಕೆಂದು ಬಯಸಿದ ವಿದ್ಯಾರ್ಥಿಯು **ವಿದ್ಯಾಂ ಲಭತೇ** ಈ ಸ್ತುತಿಯ ಪಾರಾಯಣದಿಂದ ಸೂತ್ರ-ವೇದಾದಿಶಾಸ್ತ್ರಗಳನ್ನು ಅಧ್ಯಯನ ಮಾಡುವ ಸೌಭಾಗ್ಯವನ್ನು ಪಡೆಯುತ್ತಾನೆ.

**ವಿದ್ಯಾರ್ಥೀ ಅವಿದ್ಯಾಂ ಲಭತೇ**

३) यद्वा विद्यार्थी लौकिकविद्याया मोक्षविरोधिविद्यात्वात् तन्निवृत्तिकामः अविद्यां मोक्षविरोधिविद्यभावं लभते । अभावार्थे अव्ययीभावाभावः, विरोधिविद्याव्ययस्य सूचनार्थम् ।

ಅಥವಾ **ವಿದ್ಯಾರ್ಥೀ** ಎಂದರೆ ಲೌಕಿಕವಿದ್ಯೆಯು ಮುಕ್ತಿವಿರೋಧಿ-ಯಾಗಿರುವುದರಿಂದ ಆ ವಿದ್ಯೆಯ ನಿವೃತ್ತಿಯನ್ನು ಬಯಸಿದವನು ಈ ಸ್ತುತಿಯನ್ನು ಪಾರಾಯಣ ಮಾಡಿದರೆ **ಅವಿದ್ಯಾಂ ಲಭತೇ** ಲೌಕಿಕವಿದ್ಯೆಯ ಅಭಾವವನ್ನು ಹೊಂದುತ್ತಾನೆ. ಅರ್ಥಾತ್ ಲೌಕಿಕವಿದ್ಯೆಯನ್ನು ಪಡೆಯುವುದೇ ಇಲ್ಲ ಎಂದು ಅರ್ಥ. ಅಭಾವಾರ್ಥದಲ್ಲಿ ಅವ್ಯಯೀಭಾವವಾಗಿ ಅವಿದ್ಯಂ ಎಂದು ಆಗಬೇಕಿತ್ತು. ಆದರೆ ಲೌಕಿಕವಿದ್ಯೆ ಇದು ಅವ್ಯಯವಲ್ಲ ನಾಶರಹಿತವಲ್ಲ. ಅದಕ್ಕೆ ನಾಶವಿದೆ ಎಂದು ಸೂಚಿಸುವುದಕ್ಕಾಗಿ ಅವಿದ್ಯಾಂ ಎಂಬ ಪ್ರಯೋಗವೆಂದು ತಿಳಿಯಬೇಕು.

४) अथवा विद्यार्थी विद्यास्वरूपस्य भगवतः वायोः भारत्याः उमायाः वा ज्ञानस्य अनुग्रहस्य वा अपेक्षावान् विद्यां विष्णुवायुभारती-पार्वतीज्ञानं तदनुग्रहं वा लभते ।

ಅಥವಾ **ವಿದ್ಯಾರ್ಥೀ** ಎಂದರೆ ವಿದ್ಯಾಸ್ವರೂಪನಾದ ಪರಮಾತ್ಮನ, ವಾಯುದೇವರ, ಭಾರತಿಯ, ಉಮಾದೇವಿಯ ಜ್ಞಾನದ, ಅನುಗ್ರಹದ ಅಪೇಕ್ಷೆ ಇದ್ದವನು, **ವಿದ್ಯಾಂ ಲಭತೇ** ವಿಷ್ಣು-ವಾಯು-ಭಾರತೀ-ಪಾರ್ವತಿಯರ ಜ್ಞಾನವನ್ನು, ಅವರ ಅನುಗ್ರಹವನ್ನು ಪಡೆಯುತ್ತಾನೆ.

**ಧನಾರ್ಥೀ ಲಭತೇ ಧನಮ್**

१) धनकामः स्तोत्रं पठेद्यः स धनं लभते भगवदपरोक्षज्ञानसाधनसम्पदं लभते । ''लक्ष्मीं नः कलयेज्जयी सुकृतमध्यक्षीकृतक्षोभणाम्'' इत्युक्तरीत्या ज्ञातव्यम् । ''धनं हि धर्मैकफलं'' इत्युक्तदिशा ''युद्धं महाधनं त्वर्भं प्रसिद्धं धनमेव हि'' इति ऋग्भाष्यवचनानुगुणं धनार्थी युद्धरूपधनार्थी क्षत्रियः विजयोपेतः,

जयोपेतवाग्युद्धरूपधनार्थी ब्राह्मणः तादृग्धनं लभते । इत्यपि अर्थो ज्ञातुं शक्यः । धर्मसाधनभूतं धनं वा लभते ।

**ಧನಾರ್ಥೀ** ಧನವನ್ನು ಅಪೇಕ್ಷಿಸಿ ಈ ಸ್ತುತಿಯನ್ನು ಪಠಿಸಿದರೆ **ಧನಂ ಲಭತೇ** ಅವನು ಧನವಂತನಾಗುತ್ತಾನೆ. ಭಗವದಪರೋಕ್ಷಕ್ಕೆ ಸಾಧನವಾದ ಸಂಪತ್ತನ್ನು ಪಡೆಯುತ್ತಾನೆ. **ಧನಾರ್ಥೀ** ಯುದ್ಧರೂಪವಾದ ಧನವನ್ನು ಬಯಸಿದ ಕ್ಷತ್ರಿಯನು ಈ ಸ್ತೋತ್ರವನ್ನು ಪಠಿಸಿದರೆ **ಧನಂ ಲಭತೇ** ವಿಜಯರೂಪವಾದ ಧನವನ್ನು ಪಡೆಯುತ್ತಾನೆ. **ಧನಾರ್ಥೀ** ವಾಗ್ಯುದ್ಧರೂಪವಾದ ಧನವನ್ನು ಅಪೇಕ್ಷಿಸಿದ ಬ್ರಾಹ್ಮಣನು **ಧನಂ ಲಭತೇ** ವಾಗ್ಯುದ್ಧದಲ್ಲಿ ವಿಜಯರೂಪವಾದ ಧನವನ್ನು ಪಡೆಯುತ್ತಾನೆ. ಈ ರೀತಿಯಾಗಿಯೂ ಅರ್ಥವನ್ನು ತಿಳಿಯಬಹುದು.

ಧರ್ಮಕ್ಕೆ ಸಾಧನವಾದ ಧನವನ್ನು ಪಡೆಯುತ್ತಾನೆ ಎಂದೂ ಅರ್ಥವನ್ನು ತಿಳಿಯಬಹುದು.

**ಧನಾರ್ಥೀ ಅಧನಂ ಲಭತೇ**

२) धनार्थी धर्ममोक्षविरोधिधननिवृत्त्यर्थी अधनं अधनत्वं तादृग्धनाभावं लभते ।

**ಧನಾರ್ಥೀ** ಧರ್ಮಕ್ಕೆ ವಿರೋಧಿಯಾದ ಧನ ಬರಬಾರದು ಎಂಬ ಅಪೇಕ್ಷೆ ಇದ್ದವನು **ಅಧನಂ ಲಭತೇ** ಆ ಧನವನ್ನು ಪಡೆಯುವುದೇ ಇಲ್ಲ.

**ಸರ್ವಥಾ ಸಂದೇಹಃ ಮಾಽಸ್ತು**

सर्वथा सर्वेण प्रकारेण केनापि प्रकारेणेति यावत् । सन्देहः माऽस्तु । मा अयं न माङ् । वायोः सामर्थ्यं अस्ति न वा, अस्ति चेत् सर्वेषां फललाभः कुतो न जातः । नास्ति चेत् मम कथं लाभो भविता इति सन्देहो मास्तु । भक्त्यादिवैगुण्यनिमित्तः केषांचित् फलालाभः, केषांचित् प्रबलप्रारब्धप्रतिबन्धनिमित्तः । न तु शक्त्यभावनिमित्तः ।

ಇಲ್ಲಿ ಹೇಳಿದ ಪ್ರಯೋಜನ ಆಗುತ್ತದೋ ಇಲ್ಲವೋ ಎಂದು ಸಂದೇಹ ಪಡುವುದು ಸರಿಯಲ್ಲ. ಮಾಸ್ತು ಎಂಬಲ್ಲಿ ಮಾ ಎಂಬ ಶಬ್ದವೇ ಹೊರತು ಇದು ಮಾಙ್ ಅಲ್ಲ. ಆದ್ದರಿಂದ ಲುಙ ಪ್ರಸಕ್ತಿ ಇಲ್ಲ.

ವಾಯುದೇವರಿಗೆ ಸಾಮರ್ಥ್ಯ ಇದೆಯೇ ಇಲ್ಲವೇ? ಇದೆ ಎಂದರೆ ಈ ಸ್ತೋತ್ರವನ್ನು ಪಠಿಸಿದವರೆಲ್ಲರಿಗೂ ಯಾಕೆ ಫಲವು ಲಬ್ಧವಾಗಿಲ್ಲ. ವಾಯುದೇವರಿಗೆ ಫಲ ನೀಡುವ ಸಾಮರ್ಥ್ಯ ಇಲ್ಲ ಎಂದಾದರೆ ನನಗೆ ಫಲ ಹೇಗೆ ಸಿಕ್ಕೀತು? ಎಂಬ ಸಂದೇಹ ಬೇಡ. ಭಕ್ತ್ಯಾದಿಗಳಲ್ಲಿಯ ಕೊರತೆಯಿಂದಾಗಿ ಹಲವರಿಗೆ ಫಲವು ದೊರೆತಿಲ್ಲ. ಅಥವಾ ಪ್ರಬಲವಾದ ಪ್ರಾರಬ್ಧ ಎಂಬ ಪ್ರತಿಬಂಧಕ ಇದ್ದದ್ದರಿಂದಾಗಿ ಫಲವು ದೊರೆತಿಲ್ಲ ಎಂದು ಹೇಳಬೇಕು. ಅಷ್ಟೇ ಹೊರತು ವಾಯುದೇವರಿಗೆ ಶಕ್ತಿ ಇಲ್ಲ ಎಂಬ ಕಾರಣಕ್ಕಾಗಿ ಫಲ ದೊರೆತಿಲ್ಲ ಎಂದು ಹೇಳುವುದು ಸಮಂಜಸವಲ್ಲ.

**वैदिकमन्त्रपठनेन भवति फललाभः । पौरुषेयस्तोत्रपठनेन कथं भवति इत्यपि संशयो मास्तु । ‘‘वैदिकतान्त्रिकैश्च’’ इति भागवते (८.६.९) वैदिकैस्तान्त्रिकैरपि’’ इति महाभारततात्पर्यनिर्णये च (२२.८६) पौरुषेयग्रन्थपठनेनापि फललाभस्य प्रतिपादनात् ।**

ವೈದಿಕವಾದ ಸ್ತೋತ್ರಗಳನ್ನು ಪಠಿಸಿದರೆ ಫಲಲಾಭವಿದೆ. ಪೌರುಷೇಯವಾದ ಸ್ತುತಿಗಳನ್ನು ಪಠಿಸಿದರೆ ಫಲ ದೊರೆಯುವುದೋ ಇಲ್ಲವೋ ಎಂಬ ಸಂಶಯವೂ ಬೇಡ. ''ವೈದಿಕತಾಂತ್ರಿಕೈಶ್ಚ'' ಎಂಬ ಭಾಗವತ ವಚನವು ಮತ್ತು 'ವೈದಿಕೈಸ್ತಾಂತ್ರಿಕೈರಪಿ'' ಎಂಬ ತಾತ್ಪರ್ಯನಿರ್ಣಯವು ಪೌರುಷೇಯ-ಗ್ರಂಥಗಳನ್ನು ಪಠಿಸುವುದರಿಂದಲೂ ಫಲಲಾಭವಾಗುತ್ತದೆ ಎಂದು ಪ್ರತಿಪಾದಿಸಿದೆ. ಆದ್ದರಿಂದ ಈ ಸಂದೇಹಕ್ಕೆ ಅವಕಾಶವೇ ಇಲ್ಲ.

### ಹರಿಃ ಸಾಕ್ಷೀ ಜಗತ್ಪತಿಃ

**जगत् वायुः तत्पतिः जगत्पतिः, स्तावकसर्वजगत्पतिः इष्टजगतः इष्टसम्पादनघटकसर्वजगतः पतिः हरिः अत्र वायुस्तवनेन सर्वेष्टप्राप्तिरूपे अर्थे साक्षी साक्षाद्द्रष्टा ।**

ಜಗತ್ ಎಂದರೆ ವಾಯುದೇವರು ಎಂದು ಅರ್ಥ. ಆ ವಾಯುದೇವರಿಗೆ ಸ್ವಾಮಿಯಾದ ಪರಮಾತ್ಮನು ಜಗತ್ಪತಿ ಎನಿಸುತ್ತಾನೆ. ಅಥವಾ ಸ್ತೋತ್ರಮಾಡುವ ಎಲ್ಲ ಜಗತ್ತಿಗೆ ಅಂದರೆ ಜನರಿಗೆ ಪತಿಯಾದವನು ಆದ್ದರಿಂದ ಜಗತ್ಪತಿ ಪರಮಾತ್ಮ. ನಮಗೆ ಇಷ್ಟವಾದ ಸಮಸ್ತ ಜಗತ್ತಿಗೆ ಪತಿಯಾದದ್ದರಿಂದ ಜಗತ್ಪತಿ ಪರಮಾತ್ಮ.

**ಯಃ ಕರೋತ್ಯತ್ರ ಸಂದೇಹಂ ಸ ಯಾತಿ ನರಕಂ ಧ್ರುವಮ್**

१) अत्र विषये यः सन्देहं करोति स नरकं ध्रुवं याति ।

ವಾಯುದೇವರ ಈ ಸ್ತೋತ್ರದಿಂದ ಸಕಲ ಅಭೀಷ್ಟಗಳು ಸಿದ್ಧಿಸುತ್ತವೆ ಎಂಬ ವಿಷಯದಲ್ಲಿ ಜಗತ್ಪತಿಯಾದ ಪರಮಾತ್ಮನೇ ಸಾಕ್ಷಿಯಾಗಿದ್ದಾನೆ. ಈ ವಿಷಯದಲ್ಲಿ ಸಂದೇಹವಿಲ್ಲ. ಸಂದೇಹ ಪಟ್ಟವರಿಗೆ ನರಕ ನಿಶ್ಚಿತ.

**ಯಃ ಸಂದೇಹಂ ಕರೋತಿ ವಿಷ್ಣುಂ ವಾಯುಂ ಪ್ರಾಪ್ನೋತಿ**

२) यः अत्र स्तोत्रपठनविषये सन्देहं सं परमात्मानं ददातीति सन्दा, सन्दा ईहा चेष्टा यस्मिन् कर्मणि यथा स्यात् तथा । सन्देहं करोति प्रवर्तते । भगवत्प्राप्तिर्यथा स्यात् तथा भक्त्या श्रद्धया वेदादि-शास्त्रोक्तरीत्या कर्म कुर्वाणः स्तोत्रं पठतीति यावत्। सः नरकं नराणां जीवानां कं सुखं यस्मात् तं वायुं विष्णुं वा ध्रुवं निश्चयेन याति ।

ಸಂದಾ ಈಹಾ ಎಂದು ಪದವಿಭಾಗ ಮಾಡಿಕೊಂಡು ಮತ್ತೊಂದು ಅರ್ಥವನ್ನು ತಿಳಿಯಬೇಕು. **ಸಂ** ಪರಮಾತ್ಮನನ್ನು **ದ** ಕೊಡುವಂಥ **ಈಹಾ** ಚೇಷ್ಟಾ ಪರಮಾತ್ಮನನ್ನು ಪಡೆಯುವಂಥ ವ್ಯಾಪಾರಗಳನ್ನು ಮಾಡುವವನಾಗಿ ಭಕ್ತಿಯಿಂದ ಶ್ರದ್ಧೆಯಿಂದ ವೇದಾದಿಗಳಲ್ಲಿ ಹೇಳಿದಂತೆ ಕರ್ಮಗಳನ್ನು ಮಾಡುತ್ತಾ ಈ ಸ್ತೋತ್ರವನ್ನು ಪಠಿಸಬೇಕು. ಅಂಥವನು ನರಕವನ್ನು ಹೊಂದುತ್ತಾನೆ.

ಇದೇನು? ಭಕ್ತಿ-ಶ್ರದ್ಧೆಗಳಿಂದ ಸ್ತುತಿ ಮಾಡಿದರೇ ನರಕವೇ? ಎಂದು ಹುಬ್ಬೇರಿಸಬೇಡಿ? ಇಲ್ಲಿ ನರಕ ಎಂದರೇ ವಾಯುದೇವರು, ಪರಮಾತ್ಮ ಎಂದು ಅರ್ಥ.

ಅದು ಹೇಗೆ? ಅವಸರ ಬೇಡ. ಸಾವಧಾನವಾಗಿ ತಿಳಿಯಿರಿ. ನರ ಕಂ ಎಂದು ಪದಚ್ಛೇದ ಮಾಡಿಕೊಳ್ಳಬೇಕು. **ನರ** ಮನುಷ್ಯರಿಗೆ **ಕ** ಸುಖವು ಯಾರಿಂದ ಆಗುವುದೋ ಅಂಥ ವಾಯುದೇವರು ಮತ್ತು ಪರಮಾತ್ಮ ನರಕಶಬ್ದವಾಚ್ಯನಾಗುತ್ತಾನೆ. ತನಗೆ ಸುಖನೀಡುವ ವಾಯುದೇವರ ಮತ್ತು ಪರಮಾತ್ಮನ ಪ್ರಾಪ್ತಿ ಆ ಸಾಧಕನಿಗೆ ಆಗುತ್ತದೆ. ಇದು ನಿಶ್ಚಿತ. ಈಗ ಆಕಾಂಕ್ಷೆಗಳೆಲ್ಲ ಶಾಂತವಾಯಿತಲ್ಲವೇ?

**ಯಃ ಸಂದೇಹಂ ನ ಕರೋತಿ ಸಃ ಧ್ರುವಂ ರಕಂ ಯಾತಿ**

**३) न रकमिति पदच्छेदः । यः अत्र सन्देहं न करोति स ध्रुवं शाश्वतं रकं रः रमणं क्रीडा तद्युक्तं कं सुखं याति प्राप्नोति ।**

ಅಥವಾ **ನ ರಕಂ** ಎಂದು ಪದಚ್ಛೇದ ಮಾಡಿಕೊಳ್ಳಬೇಕು. ಯಾರು ಈ ವಿಷಯದಲ್ಲಿ ಸಂದೇಹ ಪಡುವುದಿಲ್ಲವೋ ಅವನು **ಧ್ರುವಂ** ಶಾಶ್ವತವಾದ **ರಕಂ** **ರಃ** ಎಂದರೆ ರಮಣ ಕ್ರೀಡಾ ಎಂದು ಅರ್ಥ. **ಕಂ** ಎಂದರೆ ಸುಖ ಎಂದು ಅರ್ಥ. ಕ್ರೀಡಾಯುಕ್ತವಾದ ಸುಖವನ್ನು ಅವನು ಹೊಂದುತ್ತಾನೆ.

ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸುವವ ಪರಮಾತ್ಮನನ್ನು ಪಡೆಯುತ್ತಾನೆ ಎಂಬ ವಿಷಯದಲ್ಲಿ ಯಾರು ಸಂದೇಹ ಪಡುವುದಿಲ್ಲವೋ ಅವನು ಕ್ರೀಡಾಯುಕ್ತವಾದ ಸುಖವನ್ನು ಮುಕ್ತಿಯಲ್ಲಿ ಪಡೆಯುತ್ತಾನೆ ಎಂದು ತಾತ್ಪರ್ಯ.

**ಯಃ ಸಂದೇಹಂ ಕರೋತಿ ಸಃ ಧ್ರುವಂ ರಕಂ ನ ಯಾತಿ**

**४) यः अत्र सन्देहं करोति स ध्रुवं रकं स्थिरं क्रीडायुक्तसुखं न याति प्राप्नोति ।**

ಯಾರು ಈ ವಿಷಯದಲ್ಲಿ ಸಂದೇಹ ಪಡುವನೋ ಅವನು **ಧ್ರುವಂ ರಕಂ** ಶಾಶ್ವತವಾದ ಕ್ರೀಡಾಯುಕ್ತವಾದ ಸುಖವನ್ನು ಪಡೆಯುವುದಿಲ್ಲ. ಎಂದು ಅರ್ಥವನ್ನು ತಿಳಿಯಬೇಕು.

**ವಾಯುಸೇವಕರಾದ ಯತಿಗಳು ಸ್ವಧರ್ಮಗಳ ಫಲವನ್ನು ಪಡೆಯುತ್ತಾರೆ**

**५) यः अत्र वायुविषये सन्देहं समीचीनां देहसाध्यां सेवां करोति स यातिनरकं नयतीति नः, यतिश्चासौ नश्च यतिनः यतिरूपः नायकः तत्सम्बन्धि यातिनं रकं यतिसंबन्धिसुखं पारिव्राज्यसम्बन्धि-धर्मानुष्ठानलभ्यं सुखमिति यावत्, याति ।**

ಯಾತಿನಂ ಚ ತತ್ ರಕಂ ಚ ಯಾತಿನರಕಂ ಎಂದು ವಿಗ್ರಹ ಮಾಡಿಕೊಳ್ಳಬೇಕು. **ಯಃ ಅತ್ರ ಸಂದೇಹಂ** ಸಮೀಚೀನವಾದ ದೇಹಸಾಧ್ಯವಾದ ಸೇವೆಯನ್ನು ಯಾರು ಮಾಡುವರೋ ಅವರು **ಯಾತಿನರಕಂ** ಧಾರ್ಮಿಕರಾದ ಭಗವದ್ಭಕ್ತರಿಗೆ ನಾಯಕರಾದ **ಯಾತಿನಂ** (ಯಾತಿ) ಯತಿಸಂಬಂಧಿಯಾದ ಸುಖವನ್ನು, ಸನ್ನ್ಯಾಸಸಂಬಂಧಿಯಾದ ಧರ್ಮಗಳ ಅನುಷ್ಠಾನದಿಂದ ಲಭ್ಯವಾದ ಸುಖವನ್ನು ಪಡೆಯುತ್ತಾರೆ. ಎಂದು ಅರ್ಥ.

ಯತಿಗಳು ಈ ಸ್ತೋತ್ರವನ್ನು ಪಠಿಸಬೇಕು. ಅವರು ಅನುಷ್ಠಾನ ಮಾಡಿದ ಯತಿಸಂಬಂಧಿಯಾದ ಎಲ್ಲ ಧರ್ಮಗಳ ಫಲವನ್ನು ಪಡೆಯುತ್ತಾರೆ ಎಂದು ತಾತ್ಪರ್ಯ.

**ಈ ಸ್ತುತಿಯನ್ನು ಪಠಿಸಿದವರು ಯತಿಗಳ ಸೇವಕರಾಗುತ್ತಾರೆ**

**६) अथवा यतिना नीयते इति यतिनः यतिशिष्यः तत्सम्बन्धि रकं सुखं याति । ''तद्भक्तोऽपि हि यद्गच्छेत्तद्गृहस्थो न धार्मिकः''(५.२) इति गीताभाष्योक्तेः ।**

ಯತಿಗಳಿಂದ ನೀತನಾಗುವವನು ಯತಿನ. ಯತಿನ ಎಂದರೆ ಯತಿಗಳ ಶಿಷ್ಯ ಎಂದು ಅರ್ಥ. ರಕ ಎಂದರೆ ಸುಖ ಎಂದು ಅರ್ಥ. ಯತಿಗಳ ಶಿಷ್ಯನಾಗಿ, ಅವರ ಸೇವೆಯನ್ನು ನಿರಂತರ ಮಾಡುವ ಸಾಧಕನು ಯಾವ ರಕವನ್ನು ಅರ್ಥಾತ್ ಸುಖವನ್ನು ಅನುಭವಿಸುವನೋ ಅಂಥ ಸುಖವನ್ನು ಪಡೆಯುತ್ತಾನೆ ಎಂಬುದಾಗಿ ಅರ್ಥ. ಅಂದರೆ ಯತಿಗಳ ಸೇವಾಭಾಗ್ಯವು ದೊರೆಯುತ್ತದೆ ಎಂದು ತಾತ್ಪರ್ಯ.

### ಸಂದೇಹಪಟ್ಟವರಲ್ಲಿ ಭಾರತಿಯು ಸಂಕ್ರುದ್ಧಳಾಗುತ್ತಾಳೆ

೭) य अत्र वायुविषये सन्देहं करोति तस्य इत्यध्याहारः सया साररूपत्वात् साशब्दवाच्यया भारत्या स्वपतिमाहात्म्यविषय-विशयामर्षया अतिनरकं ध्रुवं भवतीति शेषः ।

ಯಃ ಅತ್ರ ಸಂದೇಹಂ ಕರೋತಿ (ತಸ್ಯ) ಸಯಾ ಅತಿನರಕಂ ಧ್ರುವಂ (ಭವತಿ) ಎಂದು ಮತ್ತೊಂದು ರೀತಿಯಾಗಿ ಅನ್ವಯ ಮಾಡಿಕೊಂಡು ಅರ್ಥವನ್ನು ತಿಳಿಯಬೇಕು.

**ಯಃ** ಯಾವ ವ್ಯಕ್ತಿಯು **ಅತ್ರ** ವಾಯುದೇವರ ವಿಷಯದಲ್ಲಿ **ಸಂದೇಹಂ ಕರೋತಿ** ಸಂದೇಹ ಮಾಡುವನೋ ತಸ್ಯ ಅವನಿಗೆ **ಸಯಾ** ಸಾರರೂಪಳಾದದ್ದರಿಂದ ಸಾಶಬ್ದವಾಚ್ಯಳಾದ ಭಾರತೀದೇವಿಯಿಂದ **ಅತಿನರಕಂ** ಅತಿಶಯವಾದ ನರಕವು **ಭವತಿ** ಉಂಟಾಗುತ್ತದೆ. ಆದ್ದರಿಂದ ವಾಯುದೇವರ ಮಹಿಮೆಯ ವಿಷಯದಲ್ಲಿ ಸಂದೇಹ ಮಾಡಲೇ ಬಾರದು.

ವಾಯುದೇವರ ಮಹಿಮೆಯ ವಿಷಯದಲ್ಲಿ ಸಂದೇಹ ಪಡಬಾರದು. ಸಂದೇಹ ಪಟ್ಟವನ ಮೇಲೆ ವಾಯುದೇವರ ಪತ್ನಿಯಾದ, ಸಾರರೂಪಳಾದ ಭಾರತೀದೇವಿಯು ಕ್ರುದ್ಧಳಾಗುತ್ತಾಳೆ. ಭಾರತಿಯ ಕ್ರೋಧಕ್ಕೆ ಒಳಗಾದವನು ಅತಿದುಃಖಪ್ರದವಾದ ನರಕವನ್ನು ಹೊಂದುತ್ತಾನೆ. ಆದ್ದರಿಂದ ವಾಯುದೇವರ ಯಾವುದೇ ಮಹಿಮೆಯ ವಿಷಯದಲ್ಲಿ ಸಂದೇಹವು ತಾರಕವಲ್ಲ.

### ಫಲದ ವಿಷಯದಲ್ಲಿ ಸಂದೇಹ ಸಲ್ಲದು

೮) अत्त्रसन्देहं अत्ता फलभोक्ता, भावप्रधान्यम्, फलभोक्तृत्वविषये सन्देहाभावं करोति । अत्तरि सन्देहः अत्तृसन्देहः न अत्तृसन्देहः अत्त्रसन्देहः । न साध्याधिकरणं साध्यानधिकरणमितिवत् । अत्तृनिश्चय इति यावत् । सन्देहभिन्नः ज्ञानत्वेन सन्देहसदृशः निश्चयः तं करोति यः सः नरकं नरीयत इति नरं नाशरहितं कं सुखं याति प्राप्नोति ।

ಯಃ ಅತ್ರಸಂದೇಹಂ ಕರೋತಿ ಸಃ ನರಕಂ ಯಾತಿ ಎಂಬುದಾಗಿ ಅನ್ವಯ ಮಾಡಿಕೊಂಡು ಮತ್ತೊಂದು ರೀತಿಯಾಗಿ ಅರ್ಥವನ್ನು ತಿಳಿಯಬೇಕು.

ಅತ್ತಾ ಎಂದರೆ ಫಲಭೋಗಮಾಡುವವನು ಎಂದು ಅರ್ಥ. ಅತ್ರಸಂದೇಹಂ ಅಂದರೆ ಫಲಭೋಕ್ತೃತ್ವದ ವಿಷಯದಲ್ಲಿ ಸಂದೇಹಮಾಡುವುದಿಲ್ಲವೋ, ಅಂದರೆ ಫಲಭೋಕ್ತೃತ್ವದ ವಿಷಯದಲ್ಲಿ ನಿಶ್ಚಯ ಉಳ್ಳವನೋ ಅವನು ನಾಶರಹಿತವಾದ ಸುಖವನ್ನು ಮುಕ್ತಿಯನ್ನು ಪಡೆಯುತ್ತಾನೆ. ಹೀಗೆ ಅರ್ಥವನ್ನು ತಿಳಿಯಬೇಕು.

**सत्यप्रमोदव्रतिनः शिष्येणात्यल्पबुद्धिना ।**
**सत्यात्मनामयतिना कृतया सेवयानया ।।**

ಬ್ರಹ್ಮಚರ್ಯ-ಮೂಲರಾಮ-ಮೂಲಸೀತಾ-ದಿಗ್ವಿಜಯರಾಮಚಂದ್ರಾದಿ ಸಂಸ್ಥಾನಪ್ರತಿಮೆಗಳ ಪೂಜೆ, ಶ್ರೀಸರ್ವಮೂಲ-ಶ್ರೀಮನ್ನ್ಯಾಯಸುಧಾದಿಪಾಠ, ಪ್ರವಚನ ಮುಂತಾದ ಮುಕ್ತಿಸಾಧನವಾದ ಅನೇಕ ವ್ರತಗಳನ್ನು ಪಾಲಿಸಿದ, ಶ್ರೀಸತ್ಯಪ್ರಮೋದತೀರ್ಥರ ಶಿಷ್ಯರಾದ, ಅವರ ಮುಂದೆ ಅಲ್ಪರಾದ ಸತ್ಯಾತ್ಮತೀರ್ಥಯತಿಗಳು ಈ ವ್ಯಾಖ್ಯಾನರೂಪವಾದ ಸೇವೆಯನ್ನು ಮಾಡಿದ್ದಾರೆ.

**सत्यप्रमोदहृदयवासिनो भारतीपतेः ।**
**अन्तर्यामी मूलरामः प्रीयतां पूर्णसद्गुणः ।।**

ಈ ಸೇವೆಯಿಂದ ಪ್ರೀತರಾದ ಗುರುಗಳಾದ ಶ್ರೀಸತ್ಯಪ್ರಮೋದತೀರ್ಥರ ಹೃದಯನಿವಾಸಿಗಳಾದ ಭಾರತೀಪತಿಯ ಅಂತರ್ಯಾಮಿಗಳಾದ, ಅನಂತ ಸದ್ಗುಣಗಳಿಂದ ಪರಿಪೂರ್ಣರಾದ, ಅಸ್ಮದುಪಾಸ್ಯರಾದ ಶ್ರೀಮನ್ಮೂಲರಾಮಚಂದ್ರ-ದೇವರು ಸಂಪ್ರೀತರಾಗಲಿ.

**॥ ಅಸ್ಮದ್ಗುರ್ವಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ ಅಸ್ಮದುಪಾಸ್ಯ ಶ್ರೀಮನ್‌ಮೂಲರಾಮಚಂದ್ರಃ ಪ್ರೀಯತಾಂ ಪ್ರೀತೋ ಭವತು**

**॥ ಶ್ರೀಕೃಷ್ಣಾರ್ಪಣಮಸ್ತು ॥**

★★★

|| ಅಥ ಶ್ರೀವ್ಯಾಸತೀರ್ಥವಿರಚಿತಮ್ ||

## || ಯಂತ್ರೋದ್ಧಾರಕಹನುಮತ್ ಸ್ತೋತ್ರಮ್ ||

ನಮಾಮಿ ದೂತಂ ರಾಮಸ್ಯ ಸುಖದಂ ಚ ಸುರದ್ರುಮಮ್ ।
ಪೀನವೃತ್ತಮಹಾಬಾಹುಂ ಸರ್ವಶತ್ರುನಿವಾರಣಮ್ ||೧||

ನಾನಾರತ್ನಸಮಾಯುಕ್ತಕುಂಡಲಾದಿವಿರಾಜಿತಮ್ ।
ಸರ್ವದಾಭೀಷ್ಟದಾತಾರಂ ಸತಾಂ ವೈ ದೃಢಮಾಹವೇ ||೨||

ವಾಸಿನಂ ಚಕ್ರತೀರ್ಥಸ್ಯ ದಕ್ಷಿಣಸ್ಥಗಿರೌ ಸದಾ ।
ತುಂಗಾಂಬೋಧಿತರಂಗಸ್ಯ ವಾತೇನ ಪರಿಶೋಭಿತೇ ||೩||

ನಾನಾದೇಶಾಗತೈಃ ಸದ್ಭಿಃ ಸೇವ್ಯಮಾನಂ ನೃಪೋತ್ತಮೈಃ ।
ಧೂಪದೀಪಾದಿನೈವೇದ್ಯೈಃ ಪಂಚಖಾದ್ಯೈಶ್ಚ ಭಕ್ತಿತಃ (ಶಕ್ತಿತಃ) ||೪||

ವ್ರಜಾಮಿ(ಭಜಾಮಿ) ಶ್ರೀಹನೂಮಂತಂ ಹೇಮಕಾಂತಿಸಮಪ್ರಭಮ್ ।
ವ್ಯಾಸತೀರ್ಥಯತೀಂದ್ರೇಣ ಪೂಜಿತಂ ಚ ವಿಧಾನತಃ ||೫||

ತ್ರಿವಾರಂ ಯಃ ಪಠೇನ್ನಿತ್ಯಂ ಸ್ತೋತ್ರಂ ಭಕ್ತ್ಯಾ ದ್ವಿಜೋತ್ತಮಃ ।
ವಾಂಛಿತಂ ಲಭತೇಽಭೀಷ್ಟಂ ಷಣ್ಮಾಸಾಭ್ಯಂತರೇ ಖಲು ||೬||

ಪುತ್ರಾರ್ಥೀ ಲಭತೇ ಪುತ್ರಂ ಯಶೋಽರ್ಥೀ ಲಭತೇ ಯಶಃ ।
ವಿದ್ಯಾರ್ಥೀ ಲಭತೇ ವಿದ್ಯಾಂ ಧನಾರ್ಥೀ ಲಭತೇ ಧನಮ್ ||೭||

ಸರ್ವಥಾ ಮಾಸ್ತು ಸಂದೇಹೋ ಹರಿಃ ಸಾಕ್ಷೀ ಜಗತ್ಪತಿಃ ।
ಯಃ ಕರೋತ್ಯತ್ರ ಸಂದೇಹಂ ಸ ಯಾತಿ ನರಕಂ ಧ್ರುವಮ್ ||೮||

|| ಇತಿ ಶ್ರೀವ್ಯಾಸತೀರ್ಥವಿರಚಿತಂ ಯಂತ್ರೋದ್ಧಾರಕಹನುಮತ್ ಸ್ತೋತ್ರಮ್ ||





सत्यप्रमोदव्रतिनः शिष्येणात्यल्पबुद्धिना ।
सत्यात्मनामयतिना कृतया सेवयानया ।।
सत्यप्रमोदहृदयवासिनो भारतीपतेः ।
अन्तर्यामी मूलरामः प्रीयतां पूर्णसद्गुणः ।।